WPP-47/ 2009 - 2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ಪತ್ರಿಕೆ**

| ಭಾಗ – IV | ಬೆಂಗಳೂರು, ಸೋಮವಾರ, ಡಿಸೆಂಬರ್ ೫, ೨೦೧೧ (ಮಾರ್ಗಶಿರ ೧೪, ಶಕ ವರ್ಷ ೧೯೩೩ | ನಂ. ೯೫೮ |
|---|---|---|

**ಮುಖ್ಯ ಚುನಾವಣಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಕಚೇರಿ,**

**ಸಿ.ಆ.ಸು.ಇ. (ಚುನಾವಣೆಗಳು),**

**ಡಾ|| ಬಿ.ಆರ್. ಅಂಬೇಡ್ಕರ್ ವೀಧಿ, ಬೆಂಗಳೂರು–560 001.**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 21 ಚುವಿಸ 2011, ಬೆಂಗಳೂರು, ದಿನಾಂಕ: 4ನೇ ಡಿಸೆಂಬರ್, 2011**

1951ರ ಪ್ರಜಾ ಪ್ರಾತಿನಿಧ್ಯ ಕಾಯ್ದೆ (1951ರ 43ನೇ ಕೇಂದ್ರ ಅಧಿನಿಯಮ) ಸೆಕ್ಷನ್ 67ರ ಉಪಬಂಧಗಳ ಅನುಸಾರ ಸಾರ್ವಜನಿಕ ಮಾಹಿತಿಗಾಗಿ ಈ ಮುಂದಿನ ಘೋಷಣೆಯನ್ನು ಪ್ರಕಟಿಸಲಾಗಿದೆ.

**ನಮೂನೆ – 21ಡಿ**

(ನಿಯಮ 64ನ್ನು ನೋಡಿ)

1951ರ ಪ್ರಜಾ ಪ್ರಾತಿನಿಧ್ಯ ಕಾಯ್ದೆ ಸೆಕ್ಷನ್ 66ರಡಿ ಚುನಾವಣಾ ಫಲಿತಾಂಶ ಘೋಷಣೆ

**93–ಬಳ್ಳಾರಿ (ಎಸ್.ಟಿ.) ವಿಧಾನಸಭಾ ಕ್ಷೇತ್ರದಿಂದ ಕರ್ನಾಟಕ ವಿಧಾನಸಭೆಗೆ ಉಪ ಚುನಾವಣೆ, 2011**

1961ರ ಚುನಾವಣೆಗಳನ್ನು ನಡೆಸುವ ನಿಯಮಗಳ, ನಿಯಮ 64ರನ್ವಯ ಹಾಗೂ 1951ರ ಪ್ರಜಾ ಪ್ರಾತಿನಿಧ್ಯ ಕಾಯ್ದೆ ಸೆಕ್ಷನ್ 66ರಲ್ಲಿ ಒಳಗೊಂಡ ಉಪಬಂಧಗಳ ಅನುಸಾರವಾಗಿ **ಪಕ್ಷೇತರ ಅಭ್ಯರ್ಥಿಯಾಗಿ** ಪುರಸ್ಕರಿಸಲಾದ –

ಬಿ. ಶ್ರೀರಾಮುಲು
ತಂದೆ ತಿಮ್ಮಪ್ಪ, ಮನೆ ನಂ.133,
ದೇವಿನಗರ, 2 ನೇ ಕ್ರಾಸ್, ಬಳ್ಳಾರಿ.

ಇವರು ಸದರಿ ಸದನದಲ್ಲಿ ಶ್ರೀ ಬಿ. ಶ್ರೀರಾಮುಲು ಇವರ ರಾಜೀನಾಮೆಯಿಂದ ತೆರವಾದ ಸ್ಥಾನಕ್ಕೆ ವಿದ್ಯುಕ್ತವಾಗಿ ಚುನಾಯಿತರಾಗಿರುವರೆಂಬುದಾಗಿ ನಾನು ಘೋಷಿಸುತ್ತೇನೆ.

ಸ್ಥಳ: ಬಳ್ಳಾರಿ
ದಿನಾಂಕ: 04–12–2011

**ಎಸ್. ಶಶಿಕಾಂತ್ ಸೆಂಥಿಲ್**
ಚುನಾವಣಾಧಿಕಾರಿಗಳು,
93–ಬಳ್ಳಾರಿ (ಎಸ್.ಟಿ.) ವಿಧಾನಸಭಾ ಕ್ಷೇತ್ರ ಮತ್ತು
ಉಪ ವಿಭಾಗಾಧಿಕಾರಿಗಳು, ಬಳ್ಳಾರಿ ಉಪ ವಿಭಾಗ, ಬಳ್ಳಾರಿ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಶಾಮಯ್ಯ**
ಜಂಟಿ ಮುಖ್ಯ ಚುನಾವಣಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಿ.ಆ.ಸು.ಇ. (ಚುನಾವಣೆಗಳು)

**Office of the Chief Electoral Officer & Ex-officio Additional Chief Secretary to Govt.**

**D.P.A.R. (Elections),**

**Dr. B.R. Ambedkar Veedhi, Bangalore-560 001.**

**NOTIFICATION**

**No. DPAR 21 CHUVISA 2011, dated: 4th December, 2011**

In pursuance of the provisions of Section 67 of the Representation of the People Act, 1951 (Central Act, 43 of 1951) the following declaration of the result of election is published for general information.

**FORM 21D**
(See Rule 64)

Declaration of the result of Election under Section 66 of the
Representation of the People Act, 1951

Bye-election to the Legislative Assembly of Karnataka State from
**93-Bellary (ST) Assembly Constituency**.

In pursuance of the provisions contained in Section 66 of the Representation of the People Act, 1951, read with rule 64 of the Conduct of Elections Rules, 1961, I declare that-

B. Sriramulu
son of Thimmappa,
No. 133, Devinagara,
2nd Cross,
Bellary.

sponsored by **Independent Candidate** has been duly elected to fill the vacancy caused in that House by the resignation of Sri B. Sriramulu, having been declared vacant.

Place: Bellary
Date: 04-12-2011

**S. SASIKANTH SENTHIL**
Returning officer,
93-Bellary (ST) Assembly Constituency and Assistant Commissioner,
Bellary Sub-division, Bellary.

By Order and in the name of the Governor of Karnataka,

**T. SHAMAIAH**
Joint Chief Electoral Officer &
Ex-Officio Joint Secretary to Govt.,
D.P.A.R. (Elections).

# ವಿಶೇಷ ಪತ್ರಿಕೆ

| | | |
|---|---|---|
| ಭಾಗ – **IV-A** | ಬೆಂಗಳೂರು, ಬುಧವಾರ, ಡಿಸೆಂಬರ್ ೭, ೨೦೧೧ (ಮಾರ್ಗಶಿರ ೧೬, ಶಕ ವರ್ಷ ೧೯೩೩) | ನಂ. ೯೫೯ |

**ಕರ್ನಾಟಕ ವಿಧಾನಸಭೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ವಿಸಸ/ಶಾರಶಾ/22/ಸಮುಸನೇ/2008, ಬೆಂಗಳೂರು, ದಿನಾಂಕ: 7.12.2011**

ಕರ್ನಾಟಕ ವಿಧಾನಸಭೆಯ ಮಾನ್ಯ ಸದಸ್ಯರಾದ **ಶ್ರೀ ಸಿದ್ದು ಸವದಿ** ಅವರು ದಿನಾಂಕ: 5ನೇ ಡಿಸೆಂಬರ್, 2011 ರಂದು ವಿಧಾನ ಸಭೆಯಲ್ಲಿ ಸರ್ಕಾರಿ ಮುಖ್ಯ ಸಚೇತಕರಾಗಿ ನೇಮಿಸಲ್ಪಟ್ಟಿರುತ್ತಾರೆ.

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

## KARNATAKA LEGISLATIVE ASSEMBLY SECRETARIAT

**NOTIFICATION**

**No. KLAS/LGA/22/GCWN/2008, Bangalore, Dated: 7.12.2011**

**Shri Siddu Savadi**, Member, Legislative Assembly has been appointed as the Government Chief Whip in the Karnataka Legislative Assembly on 5th December, 2011.

**P. OMPRAKASHA**
Secretary
Karnataka Legislative Assembly


# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಬುಧವಾರ, ಡಿಸೆಂಬರ್ ೭, ೨೦೧೧ (ಮಾರ್ಗಶಿರ ೧೬, ಶಕ ವರ್ಷ ೧೯೩೩) | ನಂ. ೯೬೦ |
|---|---|---|


## REVENUE SECRETARIAT

**NOTIFICATION**

**No. RD 14 LGP 2008, Bangalore, Dated: 7.12.2011**

Whereas the draft of the following rules further to amend the Karnataka Land Revenue Rules, 1966 which the Government of Karnataka Proposes to make in exercise of the powers conferred by sub-section (1) of Section 197 of the Karnataka Land Revenue Act, 1964 (Karnataka Act 12 of 1964) is hereby published as required by sub section (1) of section 197 in Notification No. RD 14 LGP 2008, dated: 28.10.2011 published in Part IV-A of the Karnataka Gazette (Extraordinary) Dtd: 10.11.2011 inviting objections from all the persons likely to affect thereby fifteen days from the date of its publication in the Official Gazette.

Whereas the said Gazette was made available to the public on 10.11.2011.

And whereas no objection and suggestion have been received by the State Government.

Now, therefore in exercise of the powers conferred by section 197 of the Karnataka Land Revenue Act, 1964 (Karnataka Act No. 12 of 1964). The Government of Karnataka hereby makes the following rules namely:-

**RULES**

1. **Title and Commencement.-** (1) These rules may be called the Karnataka Land Revenue (Amendment) Rules, 2011.

(2) They shall come into force from the date of their publication in the Official Gazette.

2. **Amendment of Rule 119.-** In rule 119 of the Karnataka Land Revenue Rules, 1966 in sub rule (2),- for the words, brackets and figures "six months from the date of commencement of the Karnataka Land Revenue (Amendment) Rules, 2004" the words, brackets and figures "one year from the date of commencement of the Karnataka Land Revenue Rules, 2011" shall be substituted.

By order and in the name of the Governor of Karnataka,

**B.K. Ramaswamy**
Under Secretary to Government
Revenue Department (Land Grants)

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಬುಧವಾರ, ಡಿಸೆಂಬರ್ ೭, ೨೦೧೧ (ಮಾರ್ಗಶಿರ ೧೬, ಶಕ ವರ್ಷ ೧೯೩೩) | ನಂ. ೯೬೧ |
|---|---|---|


## FINANCE SECRETARIAT

### NOTIFICATION

**No. FD 07 CET 2009, Bangalore, dated: 07-12-2011**

In exercise of the powers conferred by Section 11-A of the Karnataka Tax on Entry of Goods Act, 1979 (Karnataka Act 27 of 1979), the Government of Karnataka being of the opinion that it is necessary in the public interest so to do, hereby exempts with effect from 5.2.2007 the tax payable under the said Act by Nandi Infrastructure Corridor Enterprises Limited (NICEL) and its affiliates, namely, Nandi Economic Corridor Enterprises Limited (NECE) and Nandi Engineering Limited (NEL), on the entry of following goods into local area made for use in the execution of Bangalore Mysore Infrastructure Corridor Project (BMICP), in respect of commodities specified below subject to the following conditions, namely:-

**COMMODITIES**:

(a) Construction materials including bitumen

(b) Machinery, Equipments, Tools, Parts and accessories thereof

**CONDITIONS**:

(a) duration of the benefit of exemption is coterminous with the time lines specified in the framework agreement for completion of the project.

(b) the value of machinery and equipments shall not be less than rupees twenty five lakhs for each invoice and the value of construction materials shall not be less than rupees One lakh in each invoice.

(c) the essentiality of the quantity of construction materials, machinery and equipments shall be certified by the respective Divisional Executive Engineer of the Public Works Department.

(d) the exemption is available only in respect of works covered under Article 12.1.1 of the framework agreement dated 3.4.1997 executed between the Government of Karnataka and NICEL.

(e) exemption is available in respect of entry tax assessed on NICEL and its affiliates by the Commercial Taxes Department.

(f) no exemption is available on the entry of diesel.

By Order and in the name of the Governor of Karnataka,

**D.R. SHASHIDHAR**
Under Secretary to Government,
Finance Department (C.T.-1).


# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಬುಧವಾರ, ಡಿಸೆಂಬರ್ ೭, ೨೦೧೧ (ಮಾರ್ಗಶಿರ ೧೬, ಶಕ ವರ್ಷ ೧೯೩೩) | ನಂ. ೯೬೨ |
|---|---|---|


## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ:ಎಫ್‌ಡಿ 4 ಎಸ್‌ಆರ್‌ಎ 2010, ಬೆಂಗಳೂರು, ದಿನಾಂಕ: 07.12.2011**

ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ 1978 ರ (1990ರ ಕರ್ನಾಟಕ ಅಧಿನಿಯಮ ಸಂಖ್ಯೆ 14) 8ನೇ ಪ್ರಕರಣದೊಂದಿಗೆ ಓದಲಾಗುವ 3ನೇ ಪ್ರಕರಣದ (1)ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ರಚಿಸಲು ಉದ್ದೇಶಿಸಿರುವ, ಕರ್ನಾಟಕ ಸಿವಿಲ್ ಸೇವಾ ನಿಯಮಗಳನ್ನು ಮತ್ತಷ್ಟು ತಿದ್ದುಪಡಿ ಮಾಡುವ ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ

ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳ ಮಾಹಿತಿಗಾಗಿ, ಸದರಿ ಅಧಿನಿಯಮದ 3ನೇ ಪ್ರಕರಣದ (2)ನೇ ಉಪ–ಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಿದಂತೆ ಈ ಮೂಲಕ ಪ್ರಕಟಿಸಲಾಗಿದೆ ಮತ್ತು ಸದರಿ ಕರಡನ್ನು ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಹದಿನೈದು ದಿನಗಳ ತರುವಾಯ ಅದನ್ನು ಪರಿಗಣನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ಸೂಚನೆ ನೀಡಲಾಗಿದೆ.

ಮೇಲೆ ನಿರ್ದಿಷ್ಟಪಡಿಸಿದ ಅವಧಿಯ ಮುಕ್ತಾಯಕ್ಕೆ ಮುಂಚೆ, ಸದರಿ ಕರಡಿಗೆ ಸಂಬಂಧಪಟ್ಟಂತೆ ಯಾರೇ ವ್ಯಕ್ತಿಯಿಂದ ರಾಜ್ಯ ಸರ್ಕಾರವು ಸ್ವೀಕರಿಸಬಹುದಾದ ಯಾವುದೇ ಆಕ್ಷೇಪಣೆಯನ್ನು ಅಥವಾ ಸಲಹೆಯನ್ನು ರಾಜ್ಯ ಸರ್ಕಾರವು ಪರಿಗಣಿಸುವುದು. ಆಕ್ಷೇಪಣೆಗಳು ಮತ್ತು ಸಲಹೆಗಳನ್ನು, ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ, ವಿಧಾನಸೌಧ, ಬೆಂಗಳೂರು– 560001 ಇವರಿಗೆ ಕಳುಹಿಸಬಹುದು.

**ಕರಡು ನಿಯಮಗಳು**

**1. ಶೀರ್ಷಿಕೆ ಮತ್ತು ಪ್ರಾರಂಭ–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (____ತಿದ್ದುಪಡಿ) ನಿಯಮಗಳು 2011 ಎಂದು ಕರೆಯತಕ್ಕದ್ದು.

(2) ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 224–ಬಿ ನಿಯಮದ ತಿದ್ದುಪಡಿ:–** ಕರ್ನಾಟಕ ಸಿವಿಲ್ ಸೇವಾ ನಿಯಮಗಳಲ್ಲಿ (ಇಲ್ಲಿ ಇನ್ನು ಮುಂದೆ ಸದರಿ ನಿಯಮಗಳೆಂದು ಉಲ್ಲೇಖಿಸಲಾಗಿದೆ), 224–ಬಿ ನಿಯಮದ (1)ನೇ ಉಪ ನಿಯಮದಲ್ಲಿ "247,247–ಎ" ಎಂಬ ಅಂಕಿಗಳು ಮತ್ತು ಅಕ್ಷರವನ್ನು ಬಿಟ್ಟುಬಿಡತಕ್ಕದ್ದು.

**3. 247–ಎ ನಿಯಮದ ಪ್ರತ್ಯಾಯೋಜನೆ:–** ಸದರಿ ನಿಯಮಗಳ 247–ಎ ನಿಯಮಕ್ಕೆ ಈ ಮುಂದಿನದನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:–

**"247–ಎ (1)** ಕರ್ನಾಟಕ ಲೋಕಸೇವಾ ಆಯೋಗದ ಅಥವಾ ಇತರ ಆಯ್ಕೆ ಪ್ರಾಧಿಕಾರಗಳ ಮುಖಾಂತರ, ನೇಮಕಾತಿ ನಿಯಮಗಳಿಗೆ ಸುಸಂಗತವಾಗಿ ಅಥವಾ ಅವುಗಳಿಗನುಸಾರವಾಗಿ, ಮೂವತ್ತು ವರ್ಷ ವಯಸ್ಸು ತುಂಬಿದ ತರುವಾಯ ನೇರ ನೇಮಕಾತಿಯಾಗುವ ವ್ಯಕ್ತಿಗಳ ಸಂದರ್ಭದಲ್ಲಿ, ಅವರ ಅರ್ಹತಾ ಸೇವೆಗೆ, ಗರಿಷ್ಠ ಎರಡು ವರ್ಷಗಳಿಗೆ ಒಳಪಟ್ಟು, ನೇರ ನೇಮಕಾತಿಯ ದಿನಾಂಕದ ನಿಕಟಪೂರ್ವದ ಅವರ ಜನ್ಮ ದಿನಾಂಕದಂದು ಆಗಿದ್ದ ವಯಸ್ಸು ಮತ್ತು ಮೂವತ್ತು ವರ್ಷ–ಇವುಗಳ ನಡುವಿನ ವ್ಯತ್ಯಾಸಕ್ಕೆ ಸಮನಾದ ಅವಧಿಯನ್ನು ಸೇರಿಸತಕ್ಕದ್ದು.

(2) ಒಬ್ಬ ಸರ್ಕಾರಿ ನೌಕರನಿಗೆ, ಈ ನಿಯಮದ ಅಡಿಯಲ್ಲಿ ಹೆಚ್ಚುವರಿ ಅರ್ಹತಾ ಸೇವೆಯ ಜೊತೆಗೆ 219–ಎ ನಿಯಮಕ್ಕನುಗುಣವಾಗಿ ನಿವೃತ್ತಿ ವೇತನಕ್ಕಾಗಿ ಆತನ ಸೇವೆಯನ್ನು ಗಣನೆಗೆ ತೆಗೆದುಕೊಳ್ಳಲು ಅನುಮತಿಸಿದಲ್ಲಿ, ಮೂವತ್ತು ವರ್ಷಗಳ ವಯಸ್ಸನ್ನು ಮೀರಿ ಸಲ್ಲಿಸಲಾದ ಸೈನಿಕ ಸೇವೆಯ ಭಾಗವನ್ನು ಈ ನಿಯಮದ ಅಡಿಯಲ್ಲಿ ಅರ್ಹತಾ ಸೇವೆಗೆ ಸೇರ್ಪಡೆ ಮಾಡುವುದರಿಂದ ಕಳೆಯತಕ್ಕದ್ದು.

(3) ಅರ್ಹತಾ ಸೇವೆಗೆ ಸೇರಿಸಿದ ಹೆಚ್ಚುವರಿ ಸೇವಾವಧಿಯು ಪೂರ್ಣ ವರ್ಷಗಳಾಗಿರತಕ್ಕದ್ದು ಮತ್ತು ತಿಂಗಳುಗಳ ಮತ್ತು ದಿನಗಳ ಲೆಕ್ಕದಲ್ಲಿರಬಾರದು.

(4) ಅರ್ಹತಾ ಸೇವೆಗೆ ಮಾಡುವ ಸೇರ್ಪಡೆಯು, ನಿವೃತ್ತಿಯ ಅಥವಾ ಮರಣದ ದಿನಾಂಕದಂದು ಹತ್ತು ವರ್ಷಗಳಿಗಿಂತ ಕಡಿಮೆ ಅರ್ಹತಾ ಸೇವೆಯನ್ನು ಸಲ್ಲಿಸಿದ್ದ ಸರ್ಕಾರಿ ನೌಕರನಿಗೂ ದೊರೆಯತಕ್ಕದ್ದು.

(5) ಸರ್ಕಾರಿ ನೌಕರನ ಸೇವೆಯು ತ್ರಿವಿಧ ಸೌಲಭ್ಯ ಯೋಜನೆ ನಿಯಮಗಳ ಆಡಳಿತ ವ್ಯಾಪ್ತಿಯಿಂದ ಮುಕ್ತಾಯಗೊಂಡಾಗ ಮತ್ತು ನೇರ ನೇಮಕಾತಿಯ ಮೂಲಕ ಸರ್ಕಾರಿ ಸೇವೆಗೆ ಸೇರಿದಾಗ, (1ನೇ) ಉಪ ನಿಯಮದ ಉಪಬಂಧಗಳು ಸರ್ಕಾರಿ ನೌಕರನಿಗೆ ಅನುಕೂಲಕರವಾಗಿದ್ದರೆ, 248ನೇ ನಿಯಮದ ಅಡಿಯಲ್ಲಿ ಅಂಗೀಕಾರಾರ್ಹವಾದ ಅವಧಿಗೆ ಬದಲಾಗಿ ಅವುಗಳನ್ನು ವಿಸ್ತರಿಸಬಹುದು.

(6) ಮೂವತ್ತು ವರ್ಷಗಳನ್ನು ಮೀರಿದ ವಯಸ್ಸಿನಲ್ಲಿ ನ್ಯಾಯಾಂಗ ಸೇವೆಗೆ ನೇರನೇಮಕಾತಿಯಾದ ನ್ಯಾಯವಾದಿ ವರ್ಗದ ಬಾರ್ ಸದಸ್ಯನು, (1) ನೇ ಉಪ ನಿಯಮದ ಅಥವಾ 247ನೇ ನಿಯಮದ ಮೇರೆಗಿನ ಪ್ರಯೋಜನಕ್ಕೆ ಹಕ್ಕುಳ್ಳವನಾಗಿರತಕ್ಕದ್ದು, ಆದರೆ ಅವೆರಡಕ್ಕೂ ಅಲ್ಲ;

ಪರಂತು, ಈ ನಿಯಮದ ಅಡಿಯಲ್ಲಿ ಹೆಚ್ಚುವರಿ ಅರ್ಹತಾ ಸೇವೆಯನ್ನು ಸೇರಿಸಿಕೊಳ್ಳುವ ಅವಕಾಶ ಈ ಮುಂದಿನ ಸಂದರ್ಭಗಳಲ್ಲಿ ದೊರೆಯತಕ್ಕದ್ದಲ್ಲ;

(i). 235ನೇ ನಿಯಮದ ಅಡಿಯಲ್ಲಿ ಒಳಪಡುವ ನೌಕರರು;

(ii). ತ್ರಿವಿಧ ಲಾಭ ಯೋಜನೆ ನಿಯಮಗಳ ಅಡಿಯಲ್ಲಿ ಒಳಪಡುವ ನೌಕರರು;

(iii). ವರ್ಕ್‌ಚಾರ್ಜ್ ಸಿಬ್ಬಂದಿಯಾಗಿದ್ದು ನಿಯತ ನಿವೃತ್ತಿ ವೇತನ ಸೇವೆಗಳಲ್ಲಿ ವಿಲೀನಗೊಂಡ ನೌಕರರು;

(iv). ಅನುಕಂಪದ ಆಧಾರದ ಮೇಲೆ ನೇಮಕಗೊಂಡ ನೌಕರರು;

(v). ಯಾರು ಈ ಮೊದಲು ದಿನಗೂಲಿ ಆಧಾರದ ಮೇಲೆ ಕಾರ್ಯನಿರ್ವಹಿಸಿದ್ದು, ನಂತರ ಯಾರ ಸೇವೆಗಳನ್ನು ಸರ್ಕಾರದಲ್ಲಿ ಕ್ರಮಬದ್ಧಗೊಳಿಸಲಾಗಿರುವುದೋ ಅಂಥಹ ನೌಕರರು;

(vi). ಯಾವ ಸ್ವೈಫೆಂಡರಿ ಪದವೀಧರರ ಸೇವೆಯನ್ನು ತರುವಾಯದಲ್ಲಿ ಸರ್ಕಾರದಲ್ಲಿ ಕ್ರಮಬದ್ಧಗೊಳಿಸಲಾಗಿದೆಯೋ ಆ ಸ್ವೈಫೆಂಡರಿ ಪದವೀಧರರು;

(vii). ಯಾವ ಗುತ್ತಿಗೆ ನೌಕರರ ಸೇವೆಗಳನ್ನು ವಿಶೇಷ ನಿಯಮಗಳ ಅಡಿಯಲ್ಲಿ ಸರ್ಕಾರದಲ್ಲಿ ಕ್ರಮಬದ್ಧಗೊಳಿಸಲಾಗಿದೆಯೋ ಆ ಗುತ್ತಿಗೆ ನೌಕರರು;

(viii). ಯಾವ ವ್ಯಕ್ತಿಗಳ ಪ್ರಾರಂಭಿಕ ನೇಮಕಾತಿಯು ಅಡ್‌ಹಾಕ್ ಆಧಾರದ ಮೇಲಾಗಿದ್ದು, ನಂತರ ಅವರ ಸೇವೆಯನ್ನು ವಿಲೀನಗೊಳಿಸುವ ಉದ್ದೇಶಕ್ಕಾಗಿ ರಚಿಸಲಾದ ವಿಶೇಷ ನಿಯಮಗಳ ಅಡಿಯಲ್ಲಿ ತರುವಾಯದಲ್ಲಿ ಸರ್ಕಾರಿ ಸೇವೆಯಲ್ಲಿ ವಿಲೀನಗೊಂಡಂಥ ವ್ಯಕ್ತಿಗಳು ಮತ್ತು

(ix). 1ನೇ ಏಪ್ರಿಲ್ 2006ರಂದು ಅಥವಾ ಆ ನಂತರ ನೇಮಕಗೊಂಡಿರುವ ವ್ಯಕ್ತಿಗಳು;

**247–ಬಿ(1)** ನೇಮಕಾತಿ ನಿಯಮಗಳಿಗೆ ಸುಸಂಗತವಾಗಿ ಅಥವಾ ಅವುಗಳಿಗನುಸಾರವಾಗಿ ಕರ್ನಾಟಕ ಲೋಕಸೇವಾ ಆಯೋಗದ ಅಥವಾ ಇತರ ಆಯ್ಕೆ ಪ್ರಾಧಿಕಾರಗಳ ಮುಖಾಂತರ ಮೂವತ್ತು ವರ್ಷ ವಯಸ್ಸು ತುಂಬಿದ ತರುವಾಯ ನೇಮಕಾತಿಯಾಗಿರುವ ಮಾಜಿ ಸೈನಿಕರ ಸಂದರ್ಭದಲ್ಲಿ ಮತ್ತು ಸೈನಿಕ ಸೇವೆಯಡಿಯಲ್ಲಿ ಆತನು ಸಲ್ಲಿಸಿದ ಸೇವೆಗಾಗಿ ಸೈನಿಕ ನಿವೃತ್ತಿ ವೇತನವನ್ನು ಪಡೆಯುತ್ತಿದ್ದರೆ ಮತ್ತು ಸೈನಿಕ ನಿವೃತ್ತಿ ವೇತನಕ್ಕೆ ಬದಲಾಗಿ ರಾಜ್ಯ ಸರ್ಕಾರದಲ್ಲಿ ಸಂಯೋಜಿತ ನಿವೃತ್ತಿ ವೇತನಕ್ಕಾಗಿ ಆತನ ಹಿಂದಿನ ಸೈನಿಕ ಸೇವೆಯನ್ನು ಗಣನೆಗೆ ತೆಗೆದುಕೊಳ್ಳಲು ಅನುಮತಿಸಲಾಗಿಲ್ಲದಿದ್ದರೆ, ಗರಿಷ್ಠ ನಾಲ್ಕು ವರ್ಷಗಳಿಗೆ ಒಳಪಟ್ಟು, ನೇರ ನೇಮಕಾತಿಯ ದಿನಾಂಕದ ನಿಕಟಪೂರ್ವದಲ್ಲಿನ ಅವರ ಜನ್ಮ ದಿನಾಂಕದಂದು ಆಗಿದ್ದ ವಯಸ್ಸು ಮತ್ತು ಮೂವತ್ತು ವರ್ಷಗಳು– ಇವುಗಳ ನಡುವಿನ ವ್ಯತ್ಯಾಸಕ್ಕೆ ಸಮನಾದ ಅವಧಿಯನ್ನು ಅವರ ಅರ್ಹತಾ ಸೇವೆಗೆ ಸೇರಿಸತಕ್ಕದ್ದು.

(2) ಅರ್ಹತಾ ಸೇವೆಗೆ ಸೇರಿಸಿದ ಹೆಚ್ಚುವರಿ ಸೇವಾವಧಿಯು ಪೂರ್ಣ ವರ್ಷಗಳಾಗಿರತಕ್ಕದ್ದು ಮತ್ತು ತಿಂಗಳುಗಳ ಮತ್ತು ದಿನಗಳ ಲೆಕ್ಕದಲ್ಲಿರಬಾರದು.

(3) ಅರ್ಹತಾ ಸೇವೆಗೆ ಹೆಚ್ಚುವರಿ ಸೇವೆಯನ್ನು ಸೇರಿಸಿಕೊಳ್ಳುವ ಅವಕಾಶವು ನಿವೃತ್ತಿ ಸಮಯದಲ್ಲಿ ಅಥವಾ ಮರಣ ಹೊಂದಿದಾಗ ಹತ್ತು ವರ್ಷಗಳಿಗೂ ಕಡಿಮೆ ಅರ್ಹತಾ ಸೇವೆ ಸಲ್ಲಿಸಿದ್ದ ಸರ್ಕಾರಿ ನೌಕರನಿಗೂ ದೊರೆಯತಕ್ಕದ್ದು.

ಪರಂತು, ಮೂವತ್ತು ವರ್ಷಗಳ ವಯಸ್ಸನ್ನು ಪೂರ್ಣಗೊಳಿಸಿದ ತರುವಾಯ ಸಲ್ಲಿಸಿದ ಸೈನಿಕ ಸೇವೆಯ ಅವಧಿಯನ್ನು (1)ನೇ ಉಪ ನಿಯಮದ ಅಡಿಯಲ್ಲಿನ ಸೌಲಭ್ಯವನ್ನು ನೀಡುವಾಗ ಕಡಿತಗೊಳಿಸತಕ್ಕದ್ದು.

ಪರಂತು, ಈ ನಿಯಮಗಳು 1ನೇ ಏಪ್ರಿಲ್ 2006ರಂದು ಅಥವಾ ತರುವಾಯ ರಾಜ್ಯ ಸರ್ಕಾರಿ ಸೇವೆಗೆ ಸೇರುವ ಹೊಸ ನೌಕರರಿಗೆ ಅನ್ವಯಿಸತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆಲಿಸ್ ಗೊನ್ಸಾಲ್ವಿಸ್**
ಸರ್ಕಾರದ ಅಧೀನ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಸೇವೆಗಳು–1)

## FINANCE SECRETARIAT

### NOTIFICATION

### No. FD 4 SRA 2010, Bangalore, Dated: 07.12.2011

The draft of the following rules further to amend the Karnataka Civil Services Rules, which the Government of Karnataka proposes to make in exercise of the powers conferred by sub-section (1) of Section 3 read with section 8 of the Karnataka State Civil Services Act, 1978 (Karnataka Act 14 of 1990) is hereby published as required by clause (a) of sub-section(2) of section 3 of the said Act, for the information of all the persons likely to be affected thereby and notice is hereby given that the said draft will be taken into consideration after fifteen days from the date of its publication in the official Gazette.

Any objection or suggestion which may be received by the State Government from any person with respect to the said draft, before the expiry of the period specified above will be considered by the State Government. Objections and suggestions may be addressed to the Principal Secretary to Government, Finance Department, Vidhana Soudha, Bangalore-560 001.

### DRAFT RULES

**1. Title and commencement.-** (1) These rules may be called the Karnataka Civil Services (____ Amendment) Rules, 2011.

(2) They shall come into force from the date of their publication in the official Gazette.

**2. Amendment of rule 224B.-** In the Karnataka Civil Service Rules (herein after referred to as said rules) in Rule 224-B, in sub-rule(1) the figures and letter "247, 247-A", shall be omitted.

**3. Substitution of rule 247-A.-** For Rule 247-A of the said rules, the following shall be substituted, namely:-

**"247-A (1)** In case of persons directly recruited after completing the age of 30 years in consonance with or pursuant to the rules of recruitment, through Karnataka Public Service Commission or other recruiting authorities, there shall be added to their qualifying service, a period equal to the difference between the age on their date of birth immediately preceding the date of direct recruitment and thirty years, subject to a maximum of two years.

(2) Where a Government servant is allowed to count his service for pension in accordance with rules 219-A together with additional qualifying service under this rule, the portion of military service exceeding thirty years of age shall be deducted from the addition to qualifying service under this rule.

(3) The addition to qualifying service shall be in terms of completed years and not in terms of months and days.

(4) The addition to qualifying service is also admissible to a Government servant who had rendered qualifying service of less than ten years on the date of retirement or death.

(5) When the Government servant ceases to be governed by Triple Benefit Scheme rules and enters Government service by recruitment, the provisions of sub-rule(1) may be extended if it is advantageous to the Government servant in lieu of the period admissible under rule 248.

(6) A member of the Bar who is recruited to Judicial service at an age exceeding 30 years shall be entitled to the benefit under sub-rule (1) or rule 247, but not both:

Provided that the addition of qualifying service under this rule is not admissible to:-

(i). Employees governed under rule 235;

(ii). Employees governed by Triple Benefit Scheme Rules;

(iii). Employees borne on work charged establishment absorbed in regular pensionable service;

(iv). Employees appointed on compassionate grounds;

(v). Employees who were earlier working on daily wage basis and whose services are subsequently regularized in Government;

(vi). Stipendiary graduates whose services are subsequently regularized in Government;

(vii). Contract employees whose services have been regularized in Government under Special Rules;

(viii). Persons whose initial appointment was on adhoc basis and subsequently absorbed into Government service under special rules made for that purpose; and

(ix). Persons who are appointed on or after 1st April 2006;

**247-B (1)** In the case of an Ex-military person who is directly recruited after completing the age of thirty years in consonance with or pursuant to the rules of recruitment, through the Karnataka Public Service Commission or other recruitment authorities, and if he is in receipt of military pension for service rendered by him under military service, and has not been allowed to count his previous military service for a combined pension under the State Government in lieu of military pension, there shall be added to his qualifying service a period equal to the difference between the age on his date of birth immediately preceding the date of direct recruitment and thirty years subject to maximum of four years.

(2) The addition to qualifying service shall be in terms of completed years and not in terms of months and days.

(3) The addition to qualifying service is also admissible to a Government servant who had rendered qualifying service of less than ten years on the date of retirement or death;

Provided that the military service rendered after the age of thirty years shall be deducted while giving the benefit under sub-rule(1);

Provided further that these rules are not applicable to persons newly appointed on or after 1st April 2006.

By order and in the name of the Governor of Karnataka,

**ALICE GONSALVES**
Under Secretary to Government,
Finance Department (Services-1)

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಗುರುವಾರ, ಡಿಸೆಂಬರ್ ೮, ೨೦೧೧ (ಮಾರ್ಗಶಿರ ೧೭, ಶಕ ವರ್ಷ ೧೯೩೩) | ನಂ. ೯೬೭ |
|---|---|---|

## KARNATAKA LEGISLATIVE ASSEMBLY SECRETARIAT

### NOTIFICATION

**No. KLA/LGA/31/Bill/2011, Bangalore, Dated: 8.12.2011**

The following Bill was introduced in Legislative Assembly on 8.12.2011.

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹನ್ನೊಂದನೇ ಅಧಿವೇಶನ**

## ಮೈಸೂರು (ಧಾರ್ಮಿಕ ಮತ್ತು ಧರ್ಮಾದಾಯ) ಇನಾಮುಗಳ ರದ್ದತಿ (ಕರ್ನಾಟಕ ತಿದ್ದುಪಡಿ) ವಿಧೇಯಕ, 2011

**(2011ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 31)**

ಮೈಸೂರು (ಧಾರ್ಮಿಕ ಮತ್ತು ಧರ್ಮಾದಾಯ) ಇನಾಮುಗಳ ರದ್ದತಿ ಅಧಿನಿಯಮ, 1955ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ, ಮೈಸೂರು (ಧಾರ್ಮಿಕ ಮತ್ತು ಧರ್ಮಾದಾಯ) ಇನಾಮುಗಳ ರದ್ದತಿ ಅಧಿನಿಯಮ, 1955ನ್ನು (1955ರ ಮೈಸೂರು ಅಧಿನಿಯಮ 18) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೆರಡನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.**– (1) ಈ ಅಧಿನಿಯಮವನ್ನು ಮೈಸೂರು (ಧಾರ್ಮಿಕ ಮತ್ತು ಧರ್ಮಾದಾಯ) ಇನಾಮುಗಳ ರದ್ದತಿ (ಕರ್ನಾಟಕ ತಿದ್ದುಪಡಿ) ಅಧಿನಿಯಮ, 2011 ಎಂದು ಕರೆಯತಕ್ಕದ್ದು.

2. ಇದು 2007ರ ಜನವರಿ ಐದನೇ ದಿನಾಂಕದಿಂದ ಜಾರಿಗೆ ಬಂದಿದೆಯೆಂದು ಭಾವಿಸತಕ್ಕದ್ದು.

**2. 21ಎ ಪ್ರಕರಣದ ತಿದ್ದುಪಡಿ.**– ಮೈಸೂರು (ಧಾರ್ಮಿಕ ಮತ್ತು ಧರ್ಮಾದಾಯ) ಇನಾಮುಗಳ ರದ್ದತಿ ಅಧಿನಿಯಮ, 1955ರಲ್ಲಿ (1955ರ ಮೈಸೂರು ಅಧಿನಿಯಮ 18) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) ಶೀರ್ಷಿಕೆಯಲ್ಲಿ ಮತ್ತು 21ಎ ಪ್ರಕರಣದಲ್ಲಿ "ವಿಭಾಗೀಯ ಆಯುಕ್ತರು" ಎಂಬ ಪದಗಳಿಗೆ, "ಪ್ರಾದೇಶಿಕ ಆಯುಕ್ತರು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**3. 21ಬಿ ಪ್ರಕರಣದ ತಿದ್ದುಪಡಿ.**– ಮೂಲ ಅಧಿನಿಯಮದ 21ಬಿ ಪ್ರಕರಣದಲ್ಲಿ "ವಿಭಾಗೀಯ ಆಯುಕ್ತರು" ಎಂಬ ಪದಗಳಿಗೆ "ಪ್ರಾದೇಶಿಕ ಆಯುಕ್ತರು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ವಿಭಾಗೀಯ ಆಯುಕ್ತರ ಹುದ್ದೆಯನ್ನು ಈಗ ಪ್ರಾದೇಶಿಕ ಆಯುಕ್ತರು ಎಂದು ಪದನಾಮೀಕರಿಸಲಾಗಿದೆ. ಆದ್ದರಿಂದ, ಜಿಲ್ಲಾಧಿಕಾರಿಯವರು ನಿಗದಿ ಮಾಡಿರುವ ತಸ್ಥಿಕ್ ಮೊಬಲಗನ್ನು ಪುನರ್ ಪರಿಗಣಿಸಲು ಪ್ರಾದೇಶಿಕ ಆಯುಕ್ತರಿಗೆ ಅಧಿಕಾರವನ್ನು ನೀಡುವ ದೃಷ್ಟಿಯಿಂದ ಮೈಸೂರು (ಧಾರ್ಮಿಕ ಮತ್ತು ಧರ್ಮಾದಾಯ) ಇನಾಮುಗಳ ರದ್ದತಿ ಅಧಿನಿಯಮ, 1955ಕ್ಕೆ ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಡಾ. ವಿ. ಎಸ್. ಆಚಾರ್ಯ**
ಉನ್ನತ ಶಿಕ್ಷಣ, ಯೋಜನೆ, ಸಾಂಖ್ಯಿಕ,
ಮುಜರಾಯಿ, ಮಾಹಿತಿ ತಂತ್ರಜ್ಞಾನ ಮತ್ತು
ಜೈವಿಕ ತಂತ್ರಜ್ಞಾನ ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**ಅನುಬಂಧ**

ಮೈಸೂರು (ಧಾರ್ಮಿಕ ಮತ್ತು ಧರ್ಮಾದಾಯ) ಇನಾಮುಗಳ ರದ್ದತಿ ಅಧಿನಿಯಮ, 1955ರ (1955ರ ಮೈಸೂರು ಅಧಿನಿಯಮ 18) ಉದ್ಧೃತ ಭಾಗ.

xx xx xx

**21ಎ. ವಿಭಾಗೀಯ ಆಯುಕ್ತರಿಂದ ಪರಿಷ್ಕರಣೆ.–** 21ನೇ ಪ್ರಕರಣದಡಿಯಲ್ಲಿ ಮೂಲ ವಾರ್ಷಿಕ ಮೊತ್ತದ ನಿರ್ಧರಣೆಯ ನಂತರ ಯಾವುದೇ ಸಮಯದಲ್ಲಿ, ವಿಭಾಗೀಯ ಆಯುಕ್ತರು, ಹಾಗೆ ನಿರ್ಧರಿಸಲಾದ ಮೂಲ ವಾರ್ಷಿಕ ಮೊತ್ತವನ್ನು ಸರಿಯಾಗಿ ನಿರ್ಧರಿಸಿಲ್ಲವೆಂಬುದೂ ಮತ್ತು ಈವರೆಗೆ ಇವರ ಗಮನಕ್ಕೆ ಬಂದಿರುವಂಥ ಯಾವುದೇ ಹೊಸ ಮತ್ತು ಪ್ರಮುಖ ವಿಷಯಗಳ ಉಲ್ಲೇಖದೊಂದಿಗೆ ಅಥವಾ ದಾಖಲೆಯ ಮೇಲಿನಿಂದಲೇ ಸೃಷ್ಟಿಯಾಗುವ ಕೆಲವು ದೋಷಗಳು ಅಥವಾ ಪ್ರಮಾದಗಳ ಮೇಲೆ ಅಥವಾ ಬಾಧಿತ ವ್ಯಕ್ತಿಯ ಅರ್ಜಿಯ ಮೇಲೆ ಅಥವಾ ಯಾವುದೇ ಇತರ ಯುಕ್ತ ಕಾರಣಕ್ಕಾಗಿ ಪರಿಷ್ಕರಿಸುವುದು ಅಗತ್ಯವೆಂಬುದನ್ನು ಮನಗಂಡರೆ, ಈತನು ತಾನಾಗಿಯೇ, 21ನೇ ಪ್ರಕರಣದಡಿಯಲ್ಲಿ ನಿರ್ಧರಿಸುವ ಮೂಲ ವಾರ್ಷಿಕ ಮೊತ್ತವನ್ನು ಹೆಚ್ಚಿಸುವುದರ ಮೂಲಕವಾಗಿಯಾಗಲೀ ಅಥವಾ ಕಡಿಮೆ ಮಾಡುವ ಮೂಲಕವಾಗಿಯಾಗಲೀ ಪರಿಷ್ಕರಿಸಬಹುದು:

ಪರಂತು, ಬಾಧಿತವ್ಯಕ್ತಿ ಅಥವಾ ತಮ್ಮ ಅಹವಾಲನ್ನು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು ನೀಡದ ಹೊರತು ಯಾವುದೇ ಆದೇಶವನ್ನು ಹೊರಡಿಸತಕ್ಕದ್ದಲ್ಲ:

ಮತ್ತು ಪರಂತು, ಯಾವುದೇ ಹೆಚ್ಚುವರಿ ಮೊಬಲಗನ್ನು ಸಂದಾಯ ಮಾಡಲಾಗಿದ್ದಲ್ಲಿ, ಅಂಥ ಹೆಚ್ಚುವರಿ ಮೊಬಲಗನ್ನು ಸಂದಾಯ ಮಾಡಬೇಕಾದ ತರುವಾಯದ ಮೂಲ ವಾರ್ಷಿಕ ಮೊತ್ತದಲ್ಲಿ ಹೊಂದಾಣಿಕೆ ಮಾಡತಕ್ಕದ್ದು ಮತ್ತು ಅಂಥ ಮೊಬಲಗನ್ನು ಹಾಗೆ ಹೊಂದಾಣಿಕೆ ಮಾಡದಿದ್ದಲ್ಲಿ, ಸದರಿ ಮೊಬಲಗನ್ನು ಭೂ ಕಂದಾಯದ ಬಾಕಿಯಂತೆ ವಸೂಲಿ ಮಾಡಬಹುದು.

**21ಬಿ. ಪುನರಾವಲೋಕನ.–** ರಾಜ್ಯ ಸರ್ಕಾರವು, ಮೈಸೂರು (ಧಾರ್ಮಿಕ ಮತ್ತು ಧರ್ಮಾದಾಯ) ಇನಾಮುಗಳ ರದ್ದತಿ (ಕರ್ನಾಟಕ ತಿದ್ದುಪಡಿ) ಅಧಿನಿಯಮ, 2005 ಆರಂಭವಾಗುವುದಕ್ಕೆ ಮೊದಲು 21ಎ ಪ್ರಕರಣದ ಅಡಿಯಲ್ಲಿ ವಿಭಾಗೀಯ ಆಯುಕ್ತರು ನಿರ್ಧರಿಸಿದ ಮೂಲ ವಾರ್ಷಿಕ ಮೊತ್ತವನ್ನು ಸರಿಯಾಗಿ ನಿರ್ಧರಿಸಿಲ್ಲವೆಂದು ಅಥವಾ ತಪ್ಪಾಗಿ ನಿರ್ಧರಿಸಿದ್ದಾರೆಂದು ಮತ್ತು ಈವರೆಗೆ ಗಮನಕ್ಕೆ ಬಂದಿರುವಂಥ ಯಾವುದೇ ಹೊಸ ವಿಷಯದ ಉಲ್ಲೇಖದೊಂದಿಗೆ ಅಥವಾ ದಾಖಲೆಯ ಮೇಲಿನಿಂದಲೇ ಸ್ಪಷ್ಟವಾಗುವ ಕೆಲವು ದೋಷಗಳು ಅಥವಾ ಪ್ರಮಾದಗಳ ಮೇಲೆ ಅಥವಾ ಬಾಧಿತ ವ್ಯಕ್ತಿಯ ಅರ್ಜಿಯ ಮೇಲೆ ಅಥವಾ ಯಾವುದೇ ಇತರ ಯುಕ್ತ ಕಾರಣಕ್ಕಾಗಿ ಪರಿಷ್ಕರಿಸುವುದು ಅಗತ್ಯವೆಂಬುದನ್ನು ಮನಗಂಡರೆ, ಇದು ಹಾಗೆ ನಿರ್ಧರಿಸುವ ಮೂಲ ವಾರ್ಷಿಕ ಮೊತ್ತವನ್ನು ಹೆಚ್ಚಿಸುವುದರ ಮೂಲಕವಾಗಿಯಾಗಲೀ ಅಥವಾ ಕಡಿಮೆ ಮಾಡುವ ಮೂಲಕವಾಗಿಯಾಗಲೀ ಪರಿಷ್ಕರಿಸಬಹುದು:

ಪರಂತು, ಬಾಧಿತವ್ಯಕ್ತಿ ಅಥವಾ ವ್ಯಕ್ತಿಗಳಿಗೆ ತಮ್ಮ ಅಹವಾಲನ್ನು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು ನೀಡದ ಹೊರತು ಯಾವುದೇ ಆದೇಶವನ್ನು ಹೊರಡಿಸತಕ್ಕದ್ದಲ್ಲ:

ಮತ್ತು ಪರಂತು, ಯಾವುದೇ ಹೆಚ್ಚುವರಿ ಮೊಬಲಗನ್ನು ಸಂದಾಯ ಮಾಡಲಾಗಿದ್ದಲ್ಲಿ, ಅಂಥ ಹೆಚ್ಚುವರಿ ಮೊಬಲಗನ್ನು ಸಂದಾಯ ಮಾಡಬೇಕಾದ ತರುವಾಯದ ಮೂಲ ವಾರ್ಷಿಕ ಮೊತ್ತದಲ್ಲಿ ಹೊಂದಾಣಿಕೆ ಮಾಡತಕ್ಕದ್ದು ಮತ್ತು ಅಂಥ ಮೊಬಲಗನ್ನು ಹಾಗೆ ಹೊಂದಾಣಿಕೆ ಮಾಡದಿದ್ದಲ್ಲಿ, ಸದರಿ ಮೊಬಲಗನ್ನು ಭೂ ಕಂದಾಯದ ಬಾಕಿಯಂತೆ ವಸೂಲಿ ಮಾಡಬಹುದು.

xx xx xx

**KARNATAKA LEGISLATIVE ASSEMBLY**

**THIRTEENTH LEGISLATIVE ASSEMBLY**

**ELEVENTH SESSION**

# THE MYSORE (RELIGIOUS AND CHARITABLE) INAMS ABOLITION (KARNATAKA AMENDMENT) BILL, 2011

**(L.A. Bill No. 31 of 2011)**

A Bill further to amend the Mysore (Religious and Charitable) Inams Abolition Act, 1955.

Whereas it is expedient further to amend the Mysore (Religious and Charitable) Inams Abolition Act, 1955 (Mysore Act 18 of 1955) for the purposes hereinafter appearing;

Be it enacted by the Karnataka State Legislature in the sixty second year of the Republic of India, as follows:-

**1. Short title and commencement.-** (1) This Act may be called the Mysore (Religious and Charitable) Inams Abolition (Karnataka Amendment) Act, 2011.

(2) It shall be deemed to have come into force with effect from fifth day of January, 2007.

**2. Amendment of section 21A.-** In the Mysore (Religious and Charitable) Inams Abolition Act, 1955 (Mysore Act 18 of 1955) (hereinafter referred to as the principal Act), in the heading and in section 21A, for the words "Divisional Commissioner", the words "Regional Commissioner" shall be substituted.

**3. Amendment of section 21B.-**In section 21B of the principal Act, for the words "Divisional Commissioner", the words "Regional Commissioner" shall be substituted.

**STATEMENT OF OBJECTS AND REASONS**

The Post of Divisional Commissioner is now redesignated as Regional Commissioner. Therefore, it is considered necessary to make amendment to the Mysore (Religious and Charitable) Inams Abolition Act, 1955, in order to empower the Regional Commissioner to reconsider the tasthik amount fixed by the Deputy Commissioner.

Hence, the Bill.

**FINANCIAL MEMORANDUM**

There is no extra expenditure involved in the proposed legislative measure.

**Dr. V.S.ACHARYA**
Minister for Higher Education, Planning,
Statistical, Muzari, Information Technology
and Bio Technology

**P. OMPRAKASHA**
Secretary
Karnataka Legislative Assembly

## ANNEXURE

### Extract from the Mysore (Religious and Charitable) Inams Abolition Act, 1955 (Mysore Act 18 of 1955)

**xx** **xx** **xx**

**21A. Revision by the Divisional Commissioner.-** If at any time after the determination of basic annual sum under section 21, the Divisional Commissioner is satisfied that the basic annual sum so determined was not correctly determined and requires to be revised with reference to any new and important matter which has since come to his notice or on account of some mistakes or error apparent on the face of the record or on an application of an aggrieved party or for any other sufficient reason, he may *suo motu* revise the basic annual sum determined under section 21 either by increasing or decreasing it:

Provided that no order shall be passed except after giving the person or persons affected a reasonable opportunity of being heard:

Provided further that if any excess amount has been paid, such excess amount shall be adjusted in the subsequent of basic annual sum to be paid and in case, such amount cannot be so adjusted, the same may be recovered as arrears of land revenue.

**21B. Review.-** The State Government may where of its own motion or otherwise at any time is satisfied that the basic annual sum determined by the Divisional Commissioner under section 21A prior to the commencement of the Mysore (Religious and Charitable) Inams Abolition (Karnataka Amendment) Act, 2005 was not correctly determined or erroneously determined and requires to be revised with reference to any new matter which has since come to its notice or on account of some mistake or error apparent on the face of the record or on an application of an aggrieved party or for any other sufficient reason, it may revise the basic annual sum so determined either by increasing or decreasing it:

Provided that no order shall be passed except after giving the person or persons so affected a reasonable opportunity of being heard:

Provided further that if any excess amount has been paid, such excess amount shall be adjusted in the subsequent basic annual, sum to be paid and in case, such amount cannot be so adjusted, the same may be recovered as arrears of land revenue.

**xx** **xx** **xx**

**P. OMPRAKASHA**
Secretary
Karnataka Legislative Assembly

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಶುಕ್ರವಾರ, ಡಿಸೆಂಬರ್ ೯, ೨೦೧೧ (ಮಾರ್ಗಶಿರ ೧೮, ಶಕ ವರ್ಷ ೧೯೩೩) | ನಂ. ೯೬೮ |
|---|---|---|

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 298 ಎಂಎಲ್ಆರ್ 2011, ಬೆಂಗಳೂರು, ದಿನಾಂಕ: 5.12.2011**

ಕರ್ನಾಟಕ ಮಹಾನಗರಪಾಲಿಕೆಗಳ ಅಧಿನಿಯಮ 32ರಲ್ಲಿ ಅಗತ್ಯವಿರುವಂತೆ **ಬೆಳಗಾವಿ** ಮಹಾನಗರಪಾಲಿಕೆಯ ಉಪಮಹಾಪೌರರ ಚುನಾವಣೆ ಫಲಿತಾಂಶವನ್ನು ಈ ಮೂಲಕ ಸಾರ್ವಜನಿಕರ ಅವಗಾಹನೆಗಾಗಿ ಪ್ರಚುರಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಆರ್.ರವೀಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ಚುನಾವಣಾ ವಿವರಣಾ ಪಟ್ಟಿ**

**ಬೆಳಗಾವಿ ಮಹಾನಗರಪಾಲಿಕೆಯ ಉಪಮಹಾಪೌರರ ಚುನಾವಣೆ**
**(14ನೇ ಅವಧಿ)**

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು | ಪಡೆದ ಸಿಂಧುವಾದ ಮತಗಳು |
|---|---|---|
| 1 | ಶ್ರೀಮತಿ ರೇಣು ಸುಹಾಸ ಕಿಲ್ಲೇಕರ | 32 |
| 2 | ಶ್ರೀ ದೀಪಕ ಈಶ್ವರ ವಾಘೇಲಾ | 00 |
| 3 | ಶ್ರೀ ಫಿರದೋಸ ಅಹಮ್ಮದ್ ಅಬ್ದುಲ್ ಮಜೀದ ದರ್ಗಾ | 27 |
| | **ಒಟ್ಟು** | **59** |

1. ಪಡೆದ ಸಿಂಧುವಾದ ಮತಗಳ ಒಟ್ಟು ಸಂಖ್ಯೆ : 59
2. ತಿರಸ್ಕೃತವಾದ ಮತಗಳ ಒಟ್ಟು ಸಂಖ್ಯೆ : 00

ಶ್ರೀಮತಿ ರೇಣು ಸುಹಾಸ ಕಿಲ್ಲೇಕರ, ನಂ. 2238/2, ಭೋವಿ ಗಲ್ಲಿ, ಬೆಳಗಾವಿ ಇವರು ಉಪಮಹಾಪೌರರ ಸ್ಥಾನಕ್ಕೆ ಬಹುಮತದಿಂದ ಹಾಗೂ ಕ್ರಮಬದ್ಧವಾಗಿ ಚುನಾಯಿತರಾಗಿದ್ದಾರೆಂದು ನಾನು ಈ ಮೂಲಕ ಘೋಷಿಸುತ್ತೇನೆ.

ಸಹಿ/–
ಪ್ರಾದೇಶಿಕ ಆಯುಕ್ತರು,
ಬೆಳಗಾವಿ ವಿಭಾಗ, ಬೆಳಗಾವಿ

**ವಿಶೇಷ ಪತ್ರಿಕೆ**

| ಭಾಗ – IV-A | ಬೆಂಗಳೂರು, ಶುಕ್ರವಾರ, ಡಿಸೆಂಬರ್ ೯, ೨೦೧೧ (ಮಾರ್ಗಶಿರ ೧೮, ಶಕ ವರ್ಷ ೧೯೩೩) | ನಂ. ೯೬೯ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/33/Bill/2011, Bangalore, Dated: 9.12.2011**

The following Bill was introduced in Legislative Assembly on 9.12.2011.

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹನ್ನೊಂದನೇ ಅಧಿವೇಶನ**

**ಕರ್ನಾಟಕ ಜಲಸಾರಿಗೆ ಮಂಡಳಿ ವಿಧೇಯಕ, 2011**

**(2011ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 33)**

ಕರ್ನಾಟಕ ರಾಜ್ಯದಲ್ಲಿ ಬಂದರುಗಳು, ಒಳನಾಡು ಜಲಮಾರ್ಗಗಳು ಮತ್ತು ಕರಾವಳಿ ಪ್ರದೇಶದ ಅಭಿವೃದ್ಧಿ ಹಾಗೂ ನಿರ್ವಹಣೆಗಾಗಿ ಒಂದು ಜಲಸಾರಿಗೆ ಮಂಡಳಿಯನ್ನು ಸ್ಥಾಪಿಸುವುದಕ್ಕಾಗಿ ಮತ್ತು ಅದಕ್ಕೆ ಸಂಬಂಧಪಟ್ಟ ಹಾಗೂ ಪ್ರಾಸಂಗಿಕವಾದ ವಿಷಯಗಳಿಗೆ ಉಪಬಂಧ ಕಲ್ಪಿಸುವುದಕ್ಕಾಗಿ ಒಂದು ವಿಧೇಯಕ.

ಬಂದರುಗಳು, ಒಳನಾಡು ಜಲ ಸಾರಿಗೆ ಮತ್ತು ಕರಾವಳಿ ಪ್ರದೇಶದ ಶೀಘ್ರ ಅಭಿವೃದ್ಧಿಗೆ ಮತ್ತು ದಕ್ಷ ನಿರ್ವಹಣೆಗಾಗಿ ಕರ್ನಾಟಕ ಜಲಸಾರಿಗೆ ಮಂಡಳಿಯನ್ನು ಸ್ಥಾಪಿಸುವುದು ಮತ್ತು ಅದಕ್ಕೆ ಸಂಬಂಧಪಟ್ಟ ಮತ್ತು ಪ್ರಾಸಂಗಿಕವಾದ ವಿಷಯಗಳಿಗಾಗಿ ಉಪಬಂಧ ಕಲ್ಪಿಸುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೆರಡನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:–

**ಅಧ್ಯಾಯ – I**

**ಪ್ರಾರಂಭಿಕ**

1. **ಸಂಕ್ಷಿಪ್ತ ಹೆಸರು, ಪ್ರಾರಂಭ ಮತ್ತು ಅನ್ವಯ.–** (1) ಈ ಅಧಿನಿಯಮವನ್ನು ಕರ್ನಾಟಕ ಜಲಸಾರಿಗೆ ಮಂಡಳಿ ಅಧಿನಿಯಮ, 2011 ಎಂದು ಕರೆಯತಕ್ಕದ್ದು.

(2) ಇದು ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ ದಿನಾಂಕದಂದು ಜಾರಿಗೆ ಬರತಕ್ಕದ್ದು.

(3) ಇದು ಭಾರತ ಬಂದರುಗಳ ಅಧಿನಿಯಮ, 1908 ಅನ್ವಯವಾಗುವ ರಾಜ್ಯದ ಎಲ್ಲ ಸಣ್ಣ ಬಂದರುಗಳಿಗೆ ಅನ್ವಯವಾಗುತ್ತದೆ.

2. **ಪರಿಭಾಷೆಗಳು.–** ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) ಯಾವುದೇ ಸಣ್ಣ ಬಂದರಿನ ಸಂಬಂಧದಲ್ಲಿ **"ಗೊತ್ತುಪಡಿಸಿದ ದಿನಾಂಕ"** ಎಂದರೆ, ಈ ಅಧಿನಿಯಮವನ್ನು ಯಾವ ದಿನಾಂಕದಂದು ಆ ಬಂದರಿಗೆ ಅನ್ವಯಿಸಲಾಗುತ್ತದೆಯೋ ಆ ದಿನಾಂಕ ;

(ಬಿ) **"ಮಂಡಳಿ"** ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ರಚಿಸಲಾದ ಕರ್ನಾಟಕ ಜಲಸಾರಿಗೆ ಮಂಡಳಿ;

(ಸಿ)**"ಮಂಡಳಿಯ ಭದ್ರತೆ"** ಎಂದರೆ, ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಮಂಡಳಿಯು ಕರಾರು ಮಾಡಿಕೊಂಡ ಯಾವುದೇ ಸಾಲದ ಸಂಬಂಧದಲ್ಲಿ ಅದು ನೀಡಿರುವ ಡಿಬೆಂಚರುಗಳು, ಬಂಧಪತ್ರಗಳು ಅಥವಾ ಹಡಗು ಕಟ್ಟೆ ಪ್ರಮಾಣ ಪತ್ರಗಳು ;

(ಡಿ) **"ಅಧ್ಯಕ್ಷರು"** ಎಂದರೆ, 3ನೇ ಪ್ರಕರಣದಡಿಯಲ್ಲಿ ನೇಮಿಸಲಾದ ಮಂಡಳಿಯ ಅಧ್ಯಕ್ಷರು ಮತ್ತು ಅದು 9ನೇ ಪ್ರಕರಣದಡಿಯಲ್ಲಿ ಆತನ ಸ್ಥಾನದಲ್ಲಿ ಕಾರ್ಯನಿರ್ವಹಿಸಲು ನೇಮಿಸಲಾದ ವ್ಯಕ್ತಿಯನ್ನು ಒಳಗೊಳ್ಳುತ್ತದೆ ;

(ಇ) **"ಹಡಗು ಕಟ್ಟೆ"** ಎಂಬುದು ಎಲ್ಲ ಕಣಿವೆ ರೇವುಗಳನ್ನು, ಮಟ್ಟಬದಲಾವಣೆಯ ಕಟ್ಟೆ, ಸಂದುಗಳು, ಪ್ರವೇಶದ್ವಾರಗಳು, ಹಡಗುಕಟ್ಟೆ ತಳಗಳು, ಹಡಗುಕಟ್ಟೆ ಬ್ಲಾಕ್‌ಗಳು, ಇಳುಕಲುಗಳು, ಇಳಿಜಾರುಕಟ್ಟೆಗಳು (slipways), ತೊಲೆಚೌಕಟ್ಟುಗಳು (gridirons), ಸ್ಥಾಯಿ ಲಂಗರುಗಳು, ರವಾನೆ ಷೆಡ್‌ಗಳು, ಉಗ್ರಾಣಗಳು, ಗೋದಾಮುಗಳು, ಬಯಲು ಪ್ಲಾಟ್‌ಗಳು ಹಾಗೂ ಹಡಗುಕಟ್ಟೆಗೆ ಸಂಬಂಧಿಸಿದ ಇತರ ಕಾಮಗಾರಿಗಳು ಮತ್ತು ವಸ್ತುಗಳು ಹಾಗೂ ಗ್ರಾಯಿನ್‌ಗಳ ಬಾಹುಗಳಿಂದ ಆವೃತವಾದ ಅಥವಾ ರಕ್ಷಿತವಾದ ಸಮುದ್ರದ ಒಂದು ಭಾಗವನ್ನು ಸಹ ಒಳಗೊಳ್ಳುತ್ತದೆ;

(ಎಫ್) ಒಂದು ಬಂದರಿಗೆ ಸಂಬಂಧಪಟ್ಟಂತೆ **"ಮುಂಗರೆ"** ಎಂದರೆ, ಆ ಬಂದರಿನ ಸಂಬಂಧದಲ್ಲಿ ನೀರಿನ ಉಬ್ಬರದ ಹಾಗೂ ಇಳಿತದ ಮಟ್ಟದ ನಡುವಿನ ಪ್ರದೇಶ ;

(ಜಿ) **"ಸರಕುಗಳು"** ಎಂಬುದು ಜಾನುವಾರು ಮತ್ತು ಚರಸ್ವತ್ತಿನ ಪ್ರತಿಯೊಂದು ಬಗೆಯನ್ನು ಒಳಗೊಳ್ಳುತ್ತದೆ.

(ಎಚ್) **"ಸರ್ಕಾರ"** ಎಂದರೆ, ರಾಜ್ಯ ಸರ್ಕಾರ ;

(ಐ) ಒಂದು ಬಂದರಿಗೆ ಸಂಬಂಧಪಟ್ಟಂತೆ **"ನೀರಿನ ಉಬ್ಬರದ ಮಟ್ಟ"** ಎಂದರೆ, ಆ ಬಂದರಿನಲ್ಲಿ ವರ್ಷದ ಯಾವುದೇ ಋತುಮಾನದಲ್ಲಿ ಸಾಮಾನ್ಯ ಉಬ್ಬರದಿಂದಾಗಿ ತಲುಪಿದ ಅತ್ಯಂತ ಎತ್ತರದ ಮಟ್ಟದ ನಿಶ್ಚಿತಸ್ಥಾನಗಳ ಮೂಲಕ ಹಾಯ್ದುಹೋಗುವ ಒಂದು ರೇಖೆ ;

(ಜೆ) **"ಸ್ಥಿರ ಸ್ವತ್ತು"** ಎಂಬುದು, ಸರಕುಕಟ್ಟೆ ಸಾಗಣೆ ಶುಲ್ಕದ ಹಕ್ಕುಗಳನ್ನು ಮತ್ತು ಯಾವುದೇ ಭೂಮಿ, ಸರಕುಕಟ್ಟೆ, ಹಡಗುಕಟ್ಟೆ ಅಥವಾ ಹಡಗು ಇಳಿದಾಣದ ಮೇಲೆ, ಮೇಲ್ಗಡೆ ಅಥವಾ ಅವುಗಳ ಸಂಬಂಧದಲ್ಲಿ ಚಲಾಯಿಸಲಾಗುವ ಎಲ್ಲ ಇತರ ಹಕ್ಕುಗಳನ್ನು ಒಳಗೊಳ್ಳುತ್ತದೆ;

(ಕೆ) **"ಭಾರತ ಬಂದರುಗಳ ಅಧಿನಿಯಮ"** ಎಂದರೆ, ಭಾರತ ಬಂದರುಗಳ ಅಧಿನಿಯಮ, 1908 (1908ರ ಕೇಂದ್ರ ಅಧಿನಿಯಮ 15);

(ಎಲ್) **"ಒಳನಾಡು ಜಲಸಾರಿಗೆ (ಐಡಬ್ಲ್ಯೂಟಿ)"** ಎಂದರೆ, ರಾಜ್ಯದಲ್ಲಿ ದೋಣಿ ನಡೆಸುವ ಸೇವೆಗಳನ್ನೊಳಗೊಂಡ ಒಳನಾಡು ಜಲಸಾರಿಗೆ ವ್ಯವಸ್ಥೆ ;

(ಎಂ) **"ಭೂಮಿ"** ಎಂಬುದು, ನೀರಿನ ಉಬ್ಬರದ ಮಟ್ಟದ ಕೆಳಗಿರುವ ಸಮುದ್ರದ ಅಥವಾ ನದಿಯ ತಳವನ್ನು ಮತ್ತು ಭೂಮಿಗೆ ಅಥವಾ ಭೂಮಿಗೆ ಯಾವುದೇ ವಸ್ತುವಿಗೆ ಖಾಯಂ ಆಗಿ ಜೋಡಿಸಲ್ಪಟ್ಟಿರುವ ವಸ್ತುಗಳನ್ನು ಕೂಡ ಒಳಗೊಳ್ಳುತ್ತದೆ;

(ಎನ್) ಒಂದು ಬಂದರಿಗೆ ಸಂಬಂಧಿಸಿದಂತೆ **"ನೀರಿನ ಇಳಿತದ ಮಟ್ಟ"** ಎಂದರೆ, ಆ ಬಂದರಿನಲ್ಲಿ ವರ್ಷದ ಯಾವುದೇ ಋತುಮಾನದಲ್ಲಿ ಸಾಮಾನ್ಯ ಇಳಿತದಿಂದಾಗಿ ತಲುಪಿದ ಅತ್ಯಂತ ಕೆಳಗಿನ ಮಟ್ಟದ ನಿಶ್ಚಿತ ಸ್ಥಾನಗಳ ಮೂಲಕ ಹಾಯ್ದುಹೋಗುವ ಒಂದು ರೇಖೆ ;

(ಒ) **"ದೊಡ್ಡ ಬಂದರು"** ಎಂಬುದು ಭಾರತ ಬಂದರುಗಳ ಅಧಿನಿಯಮದಲ್ಲಿ ನೀಡಲಾಗಿರುವ ಅರ್ಥವನ್ನೇ ಹೊಂದಿರತಕ್ಕದ್ದು;

(ಪಿ) **"ಮಾಸ್ಟರ್"** ಎಂಬುದು ಭಾರತ ಬಂದರುಗಳ ಅಧಿನಿಯಮ, 1908ರಲ್ಲಿ ನೀಡಲಾಗಿರುವ ಅರ್ಥವನ್ನೇ ಹೊಂದಿರತಕ್ಕದ್ದು;

(ಕ್ಯೂ) **"ಸದಸ್ಯ"** ಎಂದರೆ, ಸಂದರ್ಭಾನುಸಾರ ಮಂಡಳಿಯ ಅಥವಾ ಅದರ ಸಮಿತಿಯ ಒಬ್ಬ ಸದಸ್ಯ;

(ಆರ್) **"ಸಣ್ಣ ಬಂದರು"** ಎಂದರೆ, ದೊಡ್ಡ ಬಂದರನ್ನು ಹೊರತುಪಡಿಸಿದ ಬಂದರು ;

(ಎಸ್) **"ಮಾಲೀಕ"** ಎಂದರೆ, –

(i) ಸರಕುಗಳಿಗೆ ಸಂಬಂಧಿಸಿದಂತೆ ಅಂಥ ಸರಕುಗಳ ಮಾರಾಟ, ಅಭಿರಕ್ಷೆ, ತುಂಬುವ ಅಥವಾ ಇಳಿಸುವುದಕ್ಕಾಗಿರುವ ಯಾವೊಬ್ಬ ಸರಕು ರವಾನೆದಾರ, ಸರಕು ರವಾನೆ ಪಡೆಯುವವ, ಹಡಗು ಸಾಗಣೆ ವ್ಯಾಪಾರಿಯ ಏಜೆಂಟನನ್ನು ಒಳಗೊಳ್ಳುತ್ತದೆ; ಮತ್ತು

(ii) ಯಾವುದೇ ಬಂದರಿನ ಉಪಯೋಗಕ್ಕಾಗಿ ಇರುವ ಯಾವುದೇ ನೌಕೆ ಅಥವಾ ದೋಣಿಗೆ ಸಂಬಂಧಿಸಿದಂತೆ, ಯಾವೊಬ್ಬ ಭಾಗಶಃ ಮಾಲೀಕ, ಹಡಗುಬಾಡಿಗೆ ಕರಾರುದಾರ, ಸರಕು ರವಾನೆ ಪಡೆಯುವವ ಅಥವಾ ಅದರ ಸ್ವಾಧೀನ ಹೊಂದಿರುವ ಅಡಮಾನ ಪಡೆದವನನ್ನು ಒಳಗೊಳ್ಳುತ್ತದೆ;

(ಟಿ) **"ಪೈಯರ್ (ಹಡಗು ಇಳಿದಾಣ)"** ಎಂಬುದು ಯಾವುದೇ ಜಗಲಿ, ಮೆಟ್ಟಲುಗಳು ಇಳಿಯುವ ಸ್ಥಳ, ಗಟ್ಟಿ ಕಟ್ಟೆ, ತೇಲು ದೋಣಿ ಅಥವಾ ದಾಟುದೋಣಿ (ಪಾಂಟೂನ್) ಮತ್ತು ಅದಕ್ಕೆ ಸಂಬಂಧಿಸಿದ ಇತರ ಸೇತುವೆಗಳು ಅಥವಾ ಇತರ ಕಾಮಗಾರಿಗಳನ್ನು ಒಳಗೊಳ್ಳುತ್ತದೆ;

(ಯು) **"ಬಂದರು"** ಎಂದರೆ, ಭಾರತ ಬಂದರುಗಳ ಅಧಿನಿಯಮದ ಅಡಿಯಲ್ಲಿ ಸರ್ಕಾರವು ಕಾಲಕಾಲಕ್ಕೆ ಪರಿಭಾಷಿಸಬಹುದಾದಂಥ ಪರಿಮಿತಿಗಳೊಳಗೆ ಈ ಅಧಿನಿಯಮವು ಅನ್ವಯವಾಗುವ ಯಾವುದೇ ಸಣ್ಣ ಬಂದರು ;

(ವಿ) ಬಂದರಿಗೆ ಸಂಬಂಧಿಸಿದಂತೆ **"ಬಂದರು ಸಂಪರ್ಕಗಳು"** ಎಂದರೆ, ಭಾರತ ಬಂದರುಗಳ ಅಧಿನಿಯಮವು ಜಾರಿಯಲ್ಲಿರುವ ಬಂದರಿನ ಕಡೆಗೆ ಹರಿಯುವ, ನೌಕಾಸಂಚಾರ ಯೋಗ್ಯ ನದಿಗಳು ಮತ್ತು ಕಾಲುವೆಗಳ ಭಾಗಗಳು ;

(ಡಬ್ಲ್ಯೂ) **"ನಿಯಮಿಸಲಾದ"** ಎಂದರೆ, ಈ ಅಧಿನಿಯಮದಡಿಯಲ್ಲಿ ರಚಿಸಲಾದ ನಿಯಮಗಳು ಮತ್ತು ವಿನಿಯಮಗಳ ಮೂಲಕ ನಿಯಮಿಸಲಾದುದು;

(ಎಕ್ಸ್) **"ಸಾರ್ವಜನಿಕ ಭದ್ರತೆಗಳು"** ಎಂದರೆ,–

(i) ಕೇಂದ್ರ ಸರ್ಕಾರದ ಅಥವಾ ಯಾವುದೇ ರಾಜ್ಯ ಸರ್ಕಾರದ ಪ್ರಾಮಿಸರಿ ನೋಟುಗಳು, ಡಿಬೆಂಚರುಗಳು, ದಾಸ್ತಾನುಗಳು ಅಥವಾ ಇತರ ಭದ್ರತೆಗಳು:

ಪರಂತು, ಯಾವುದರ ಅಸಲು ಮತ್ತು ಬಡ್ಡಿ ಇವೆರಡಕ್ಕೂ ಅಂಥ ಯಾವುದೇ ಸರ್ಕಾರವು ಪೂರ್ಣವಾಗಿ ಮತ್ತು ಷರತ್ತುಗಳಿಲ್ಲದೆ ಖಾತರಿ ನೀಡಿರುವುದೋ ಆ ಭದ್ರತೆಗಳನ್ನು ಈ ಖಂಡದ ಉದ್ದೇಶಕ್ಕಾಗಿ ಆ ಸರ್ಕಾರದ ಭದ್ರತೆಗಳೆಂದು ಭಾವಿಸತಕ್ಕದ್ದು.

(ii) ರಾಜ್ಯದಲ್ಲಿ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಪ್ರಾಧಿಕಾರದ ಮೇರೆಗೆ ಯಾವುದೇ ಸ್ಥಳೀಯ ಪ್ರಾಧಿಕಾರವು, ಸುಧಾರಣಾ ಮಂಡಳಿಯು ಅಥವಾ ಬಂದರು ನ್ಯಾಸವು ನೀಡಿರುವ ಅಥವಾ ಅದರ ಪರವಾಗಿ ಹಣಕ್ಕಾಗಿ ನೀಡಲಾದ ಡಿಬೆಂಚರ್‌ಗಳು ಅಥವಾ (ಮಂಡಳಿಯ ಭದ್ರತೆಗಳೂ ಸೇರಿದಂತೆ) ಇತರ ಭದ್ರತೆಗಳು.

(ವೈ) **"ದರ"** ಎಂಬುದು ಈ ಅಧಿನಿಯಮದ ಅಡಿಯಲ್ಲಿ ವಿಧಿಸಬಹುದಾದ ಸುಂಕ, ತೆರಿಗೆ, ಬಾಡಿಗೆ, ಫೀಜು ಅಥವಾ ಚಾರ್ಜ್‌ನ್ನು ಒಳಗೊಳ್ಳುತ್ತದೆ ;

(ಜೆಡ್) **"ವಿನಿಯಮಗಳು"** ಎಂದರೆ, ಈ ಅಧಿನಿಯಮದ ಅಡಿಯಲ್ಲಿ ಮಂಡಳಿಯು ರಚಿಸಿದ ವಿನಿಯಮಗಳು;

(ಜೆಡ್–ಎ) **"ರಾಜ್ಯ"** ಎಂದರೆ, ಕರ್ನಾಟಕ ರಾಜ್ಯ;

(ಜೆಡ್–ಬಿ) **"ನೌಕೆ"** ಎಂಬುದು, ಮುಖ್ಯವಾಗಿ ನೀರಿನ ಮೂಲಕ, ಮನುಷ್ಯರ ಅಥವಾ ಸರಕುಗಳ ಸಾಗಣೆಗಾಗಿ ಮಾಡಿದ ಯಾವುದೇ ವಾಹನವನ್ನು ಒಳಗೊಳ್ಳುತ್ತದೆ;

(ಜೆಡ್–ಸಿ) **"ಸರಕು ಕಟ್ಟೆ"** ಎಂಬುದು ಸರಕುಗಳನ್ನು ತುಂಬುವುದಕ್ಕಾಗಿ ಅಥವಾ ಇಳಿಸುವುದಕ್ಕಾಗಿ ಅಥವಾ ಪ್ರಯಾಣಿಕರು ಹಡಗನ್ನು ಹತ್ತುವುದಕ್ಕಾಗಿ ಅಥವಾ ಹಡಗಿನಿಂದ ಇಳಿಯುವುದಕ್ಕಾಗಿ ಬಳಸಬಹುದಾದ ಯಾವುದೇ ಗೋಡೆ ಅಥವಾ ಜಗಲಿ ಮತ್ತು ಭೂಮಿಯ ಅಥವಾ ಮುಂಗರೆಯ ಯಾವುದೇ ಭಾಗವನ್ನು ಮತ್ತು ಅದಕ್ಕೆ ಲಗತ್ತಾಗಿರುವ ಅಥವಾ ಅದರ ಅಕ್ಕಪಕ್ಕದ ಗೋಡೆಯನ್ನು ಒಳಗೊಳ್ಳುತ್ತದೆ;

## ಅಧ್ಯಾಯ – II

### ಕರ್ನಾಟಕ ಜಲಸಾರಿಗೆ ಮಂಡಳಿಯ ಸ್ಥಾಪನೆ

**3. ಕರ್ನಾಟಕ ಜಲಸಾರಿಗೆ ಮಂಡಳಿಯ ಸ್ಥಾಪನೆ.–** (1) ಈ ಅಧಿನಿಯಮವು ಪ್ರಾರಂಭವಾದ ತರುವಾಯ, ಆದಷ್ಟು ಬೇಗನೇ, ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ ಕರ್ನಾಟಕ ಜಲಸಾರಿಗೆ ಮಂಡಳಿ ಎಂದು ಕರೆಯಲಾಗುವ ಒಂದು ಮಂಡಳಿಯನ್ನು ಸ್ಥಾಪಿಸಬಹುದು.

(2) ಮಂಡಳಿಯು ಈ ಮುಂದಿನ ಸದಸ್ಯರುಗಳನ್ನು ಹೊಂದಿರತಕ್ಕದ್ದು, ಎಂದರೆ :–

| | | |
|---|---|---|
| (1) | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಅಥವಾ ಸರ್ಕಾರವು ನಾಮ ನಿರ್ದೇಶನ ಮಾಡಿದ ಅಪರ ಮುಖ್ಯ ಕಾರ್ಯದರ್ಶಿ ಮತ್ತು ಅಭಿವೃದ್ಧಿ ಆಯುಕ್ತರು | ಅಧ್ಯಕ್ಷರು |
| (2) | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಲೋಕೋಪಯೋಗಿ, ಬಂದರುಗಳು ಮತ್ತು ಒಳನಾಡು ಜಲ ಸಾರಿಗೆ ಇಲಾಖೆ | ಪದನಿಮಿತ್ತ ಸದಸ್ಯರು |
| (3) | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ | ಪದನಿಮಿತ್ತ ಸದಸ್ಯರು |
| (4) | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಒಳಾಡಳಿತ ಇಲಾಖೆ | ಪದನಿಮಿತ್ತ ಸದಸ್ಯರು |
| (5) | ಸರ್ಕಾರವು ಸೂಕ್ತವೆಂದು ಭಾವಿಸಬಹುದಾದಂಥ ಯಾವುದೇ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳು | ಪದನಿಮಿತ್ತ ಸದಸ್ಯರು |
| (6) | ಭಾರತ ಸರ್ಕಾರದ ಜಂಟಿ ಕಾರ್ಯದರ್ಶಿಗಳು, ನೌಕಾ ಮಂತ್ರಾಲಯ | ಪದನಿಮಿತ್ತ ಸದಸ್ಯರು |
| (7) | ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರಾವಳಿ ಭದ್ರತೆಯ ಪ್ರಭಾರದ ಅಂತರಿಕ ಭದ್ರತಾ ಶಾಖೆ | ಪದನಿಮಿತ್ತ ಸದಸ್ಯರು |
| (8) | ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ನಿರ್ದೇಶಕರು | ಪದನಿಮಿತ್ತ ಸದಸ್ಯರು |
| (9) | ಮೀನುಗಾರಿಕಾ ಇಲಾಖೆಯ ನಿರ್ದೇಶಕರು, ಕರ್ನಾಟಕ | ಪದನಿಮಿತ್ತ ಸದಸ್ಯರು |
| (10) | ಪ್ರಭಾರದ ನೌಕಾ ಅಧಿಕಾರಿ, ಐಎನ್‌ಎಸ್ ಕದಂಬ, ಕಾರವಾರ, ಉತ್ತರಕನ್ನಡ ಜಿಲ್ಲೆ | ಪದನಿಮಿತ್ತ ಸದಸ್ಯರು |
| (11) | ಕರಾವಳಿ ರಕ್ಷಣಾ ಪಡೆಯ ಮುಖ್ಯಸ್ಥರು, ಕರ್ನಾಟಕ ಕರಾವಳಿ | ಪದನಿಮಿತ್ತ ಸದಸ್ಯರು |
| (12) | ಸೀಮಾ ಸುಂಕ ಕಲೆಕ್ಟರು, ಬೆಂಗಳೂರು | ಪದನಿಮಿತ್ತ ಸದಸ್ಯರು |
| (13) | ಬಂದರುಗಳ ಅಭಿವೃದ್ಧಿಯಲ್ಲಿ ವಿಶೇಷ ತಜ್ಞರಾದ ಈ ಮುಂದಿನಂತೆ ಸರ್ಕಾರವು ನಾಮನಿರ್ದೇಶನ ಮಾಡಿದ ನಾಲ್ಕು ವ್ಯಕ್ತಿಗಳು:– | |

| | | |
|---|---|---|
| | (i) ಮಾಸ್ಟರ್ ಮೆರೈನರ್ (ಎಫ್‌ಜಿ) (ಜಲಸಾರಿಗೆ ಸ್ನಾತಕೋತ್ತರ ಪಡೆದ) ವಿದ್ಯಾರ್ಹತೆಯನ್ನುಳ್ಳ ಮತ್ತು ಬಂದರುಗಳು, ನೌಕಾಸಾಗಣೆ, ಜಲಸಾರಿಗೆ – ಇವುಗಳಿಗೆ ಸಂಬಂಧಿಸಿದ ವಿಷಯಗಳಲ್ಲಿ ಅಥವಾ ಅಂಥ ವಿಷಯಗಳ ಆಡಳಿತ ಅಥವಾ ನಿರ್ವಹಣೆಯಲ್ಲಿ ಅನುಭವವುಳ್ಳ ಮತ್ತು ವಿಶೇಷ ಜ್ಞಾನವುಳ್ಳ ಒಬ್ಬರು ಸದಸ್ಯರು. | ಸದಸ್ಯರು |
| | (ii) ಬಂದರು ಇಂಜಿನಿಯರಿಂಗ್ ಅಥವಾ ಸಿವಿಲ್ ಇಂಜಿನಿಯರಿಂಗ್ ಪದವಿಯ ವಿದ್ಯಾರ್ಹತೆ ಮತ್ತು ಅನುಭವ, ವಿಶೇಷಜ್ಞಾನವುಳ್ಳ ಹಾಗೂ ಬಂದರು ಕಾಮಗಾರಿಗಳ ಸಂಬಂಧದಲ್ಲಿ ಅಪಾರ ಅನುಭವವುಳ್ಳ ಒಬ್ಬರು ಸದಸ್ಯರು | ಸದಸ್ಯರು |
| | (iii) ರಾಜ್ಯದ ಕರಾವಳಿ ಜಿಲ್ಲೆಗಳಲ್ಲಿ ವಾಣಿಜ್ಯ ಮತ್ತು ಕೈಗಾರಿಕಾ ಮಂಡಳಿಯನ್ನು ಪ್ರತಿನಿಧಿಸುವ ಒಬ್ಬರು ಸದಸ್ಯರು | ಸದಸ್ಯರು |
| | (iv) ಆರ್ಥಿಕ ನಿರ್ವಹಣೆಗಳಲ್ಲಿ ತಜ್ಞರಾದ ಒಬ್ಬರು ಸದಸ್ಯರು | ಸದಸ್ಯರು |
| (14) | ಕರಾವಳಿ ಇಂಜಿನಿಯರಿಂಗ್ / ಜಲಸಾರಿಗೆ ಇಂಜನಿಯರಿಂಗ್ / ಜಲಮೋಜಣಿ ಅಥವಾ ಕಡಲ ಸವೆತ ತಡೆಗಟ್ಟುವಿಕೆ / ಕರಾವಳಿ ರಕ್ಷಣೆಯಲ್ಲಿ ಅನುಭವ ಮತ್ತು ವಿಶೇಷ ಜ್ಞಾನವುಳ್ಳ ಒಬ್ಬರು ಸದಸ್ಯರು | ಸದಸ್ಯರು |
| (15) | ಮಂಡಳಿಯ ಸದಸ್ಯ (ತಾಂತ್ರಿಕ) | ಪದನಿಮಿತ್ತ ಸದಸ್ಯರು |
| (16) | ಮಂಡಳಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ | ಪದನಿಮಿತ್ತ ಸದಸ್ಯ ಕಾರ್ಯದರ್ಶಿ |

(3) ಮಂಡಳಿಯು, ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, ಚರ ಹಾಗೂ ಸ್ಥಿರ ಸ್ವತ್ತುಗಳೆರಡನ್ನೂ ಆರ್ಜಿಸುವ, ಧಾರಣಮಾಡುವ ಮತ್ತು ವಿಲೇಮಾಡುವ ಮತ್ತು ಕರಾರು ಮಾಡಿಕೊಳ್ಳುವ ಅಧಿಕಾರದೊಡನೆ, ಶಾಶ್ವತ ಉತ್ತರಾಧಿಕಾರ ಹಾಗೂ ಸಾಮಾನ್ಯ ಮೊಹರನ್ನು ಹೊಂದಿರುವ, ಮೇಲೆ ಹೇಳಿದ ಹೆಸರನ್ನುಳ್ಳ ಒಂದು ನಿಗಮಿತ ನಿಕಾಯವಾಗಿರತಕ್ಕದ್ದು ಮತ್ತು ಸದರಿ ಹೆಸರಿನಿಂದ ಅದು ದಾವೆಹೂಡಬಹುದು ಮತ್ತು ದಾವೆಗೆ ಒಳಗಾಗಬಹುದು.

(4) ರಾಜ್ಯ ಸರ್ಕಾರವು, (2)ನೇ ಉಪಪ್ರಕರಣದ (2) ರಿಂದ (5)ನೇ ಕ್ರಮಸಂಖ್ಯೆಯಲ್ಲಿ ನಮೂದಿಸಿದ ಸದಸ್ಯರ ಪೈಕಿ ಒಬ್ಬರನ್ನು ಮಂಡಳಿಯ ಉಪಾಧ್ಯಕ್ಷರನ್ನಾಗಿ ನೇಮಿಸತಕ್ಕದ್ದು.

(5) ಮಂಡಳಿಯ ಕೇಂದ್ರ ಕಛೇರಿಯು ಸರ್ಕಾರವು ಅಧಿಸೂಚನೆ ಮೂಲಕ ನಿರ್ದೇಶಿಸಬಹುದಾದಂಥ ಸ್ಥಳದಲ್ಲಿ ಇರತಕ್ಕದ್ದು.

**4. ಸದಸ್ಯರ ಅನರ್ಹತೆಗಳು** : ಒಬ್ಬ ವ್ಯಕ್ತಿಯನ್ನು,–

(ಎ) ಕೇಂದ್ರ ಅಥವಾ ಯಾವುದೇ ರಾಜ್ಯ ಸರ್ಕಾರದ ಅಥವಾ ಸ್ಥಳೀಯ ಪ್ರಾಧಿಕಾರದ ಅಥವಾ ರಾಜ್ಯ ಅಥವಾ ಕೇಂದ್ರ ಸರ್ಕಾರದ ಒಡೆತನ ಅಥವಾ ನಿಯಂತ್ರಣದಲ್ಲಿರುವ ನಿಗಮದ ಸೇವೆಯಿಂದ ತೆಗೆದುಹಾಕಿದ್ದರೆ ಅಥವಾ ವಜಾಮಾಡಿದ್ದರೆ ; ಅಥವಾ

(ಬಿ) ನೈತಿಕ ಅಧಃಪತನವನ್ನು ಒಳಗೊಂಡ ಅಪರಾಧಕ್ಕಾಗಿ ನಿರ್ಣಿತ ಅಪರಾಧಿಯಾಗಿದ್ದರೆ ಮತ್ತು ಶಿಕ್ಷೆಗೆ ಒಳಗಾಗಿದ್ದರೆ : ಅಥವಾ

(ಸಿ) ಅವಿಮುಕ್ತ ದಿವಾಳಿಯಾಗಿದ್ದರೆ ; ಅಥವಾ

(ಡಿ) ಮಂಡಳಿಯ ಆದೇಶದ ಮೂಲಕ ನಡೆಯುತ್ತಿರುವ ಯಾವುದೇ ಕಾಮಗಾರಿಯಲ್ಲಿ ಅಥವಾ ಮಂಡಳಿಯ ಮೂಲಕ ಅಥವಾ ಅದರ ಪರವಾಗಿ ಯಾವುದೇ ಕರಾರಿನಲ್ಲಿ ಅಥವಾ ನಿಯೋಜನೆಯಲ್ಲಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಯಾವುದೇ ಮಂಡಳಿಯೊಂದಿಗೆ ಷೇರನ್ನು ಅಥವಾ ಹಿತಾಸಕ್ತಿಯನ್ನು ಹೊಂದಿದ್ದರೆ :

– ಅವನು, ಮಂಡಳಿಯ ಒಬ್ಬ ಸದಸ್ಯನಾಗಿ ನೇಮಕಗೊಳ್ಳಲು ಅಥವಾ ಮುಂದುವರಿಯಲು ಅನರ್ಹನಾಗತಕ್ಕದ್ದು:

ಪರಂತು, ಯಾವೊಬ್ಬ ವ್ಯಕ್ತಿಯು,–

(i) ಮಂಡಳಿಯೊಡನೆ ಕರಾರು ಮಾಡಿಕೊಳ್ಳಬಹುದಾದ ಅಥವಾ ಮಂಡಳಿಯಿಂದ ಅಥವಾ ಅದರ ಪರವಾಗಿ ನಿಯೋಜಿತವಾಗಿರುವ ಯಾವುದೇ ಕಂಪನಿಯಲ್ಲಿ ಅಥವಾ ಫರ್ಮಿನಲ್ಲಿ ಷೇರನ್ನು ಹೊಂದಿರುವ; ಅಥವಾ

(ii) ಮಂಡಳಿಯ ವ್ಯವಹಾರಗಳಿಗೆ ಸಂಬಂಧಪಟ್ಟು ಯಾವುದೇ ಜಾಹೀರಾತನ್ನು ಹಾಕಿರಬಹುದಾದ ಯಾವುದೇ ವೃತ್ತ ಪತ್ರಿಕೆಯಲ್ಲಿ ಷೇರನ್ನು ಅಥವಾ ಹಿತಾಸಕ್ತಿಯನ್ನು ಹೊಂದಿರುವ; ಅಥವಾ

(iii) ಮಂಡಳಿಗೆ ಯಾವುದೇ ಹಣವನ್ನು ಸಾಲ ನೀಡುವುದಕ್ಕೆ ಆಸಕ್ತಿ ಹೊಂದಿರುವ; ಅಥವಾ

(iv) ತಾನು ವ್ಯಾಪಾರ ಮಾಡುವ ಯಾವುದೇ ವಸ್ತುವಿನ ಸಂಬಂಧದಲ್ಲಿ ಯಾವುದೇ ಒಂದು ಆರ್ಥಿಕ ವರ್ಷದಲ್ಲಿ ಹತ್ತು ಸಾವಿರ ರೂಪಾಯಿಗಳಿಗೆ ಮೀರದ ಮೌಲ್ಯದ ವಸ್ತುಗಳನ್ನು ಮಂಡಳಿಗೆ ಮಾರಾಟ ಮಾಡುವಲ್ಲಿ ಯಾವುದೇ ಪಾಲು ಅಥವಾ ಹಿತಾಸಕ್ತಿಯನ್ನು ಹೊಂದಿರುವ,

– ಕಾರಣ ಮಾತ್ರದಿಂದಲೇ, ಅವನು ಅಂಥ ಕಾಮಗಾರಿ, ಒಪ್ಪಂದ ಅಥವಾ ನಿಯೋಜನೆಯಲ್ಲಿ ಯಾವುದೇ ಷೇರನ್ನು ಅಥವಾ ಹಿತಾಸಕ್ತಿಯನ್ನು ಹೊಂದಿರುವನೆಂದು ಭಾವಿಸತಕ್ಕದ್ದಲ್ಲ.

**5. ಸದಸ್ಯರ ಪದಾವಧಿ.–** ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, ಮಂಡಳಿಯ ಸರ್ಕಾರೇತರ ಸದಸ್ಯನು, ಸರ್ಕಾರದ ಇಷ್ಟಪರ್ಯಂತ ಮತ್ತು ಯಾವ ಸಂದರ್ಭದಲ್ಲೂ ಎರಡು ವರ್ಷಗಳಿಗೆ ಮೀರದ ಅವಧಿಯವರೆಗೆ ಪದಧಾರಣ ಮಾಡತಕ್ಕದ್ದು.

**6. ಮಂಡಳಿಯ ಸದಸ್ಯರ ಪದವು ಖಾಲಿಯಾಗುವುದು.–** (1) ಸರ್ಕಾರವು, ಮಂಡಳಿಯ ಒಬ್ಬ ಸದಸ್ಯನು,–

(ಎ) 4ನೇ ಪ್ರಕರಣದಲ್ಲಿ ಉಲ್ಲೇಖಿಸಲಾದ ಯಾವುದೇ ಅನರ್ಹತೆಗೊಳಗಾದರೆ ; ಅಥವಾ

(ಬಿ) ಕಾರ್ಯನಿರ್ವಹಿಸಲು ನಿರಾಕರಿಸಿದರೆ ಅಥವಾ ಕಾರ್ಯನಿರ್ವಹಿಸಲು ಅಸಮರ್ಥನಾದರೆ; ಅಥವಾ

(ಸಿ) ಯಾವ ಹಿತಾಸಕ್ತಿಗಳ ಕಾರಣದಿಂದಾಗಿ ಅವನನ್ನು ನೇಮಕ ಮಾಡಲಾಗಿದೆಯೋ ಅವುಗಳನ್ನು ಪ್ರತಿನಿಧಿಸಲು ಅವನು ಅಸಮರ್ಥನೆಂದು ಸರ್ಕಾರವು ಅಭಿಪ್ರಾಯಪಟ್ಟರೆ; ಅಥವಾ

(ಡಿ) ಮಂಡಳಿಯ ಪೂರ್ವಾನುಮತಿಯನ್ನು ಪಡೆದುಕೊಳ್ಳದೇ ಮಂಡಳಿಯ ನಿರಂತರ ಮೂರು ಸಭೆಗಳಿಗೆ ಗೈರುಹಾಜರಾದರೆ ; ಅಥವಾ

(ಇ) 13ನೇ ಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸಿ ಕಾರ್ಯನಿರ್ವಹಿಸಿದರೆ,

– ಅವನನ್ನು ತೆಗೆದು ಹಾಕಬಹುದು.

(2) ಪದನಿಮಿತ್ತ ಸದಸ್ಯನಲ್ಲದ ಮಂಡಳಿಯ ಒಬ್ಬ ಸದಸ್ಯನು, ತನ್ನ ಲಿಖಿತ ರಾಜೀನಾಮೆಯನ್ನು ಅಧ್ಯಕ್ಷರಿಗೆ ಸಲ್ಲಿಸಿ ತನ್ನ ಪದಕ್ಕೆ ರಾಜೀನಾಮೆ ನೀಡಬಹುದು, ಅಧ್ಯಕ್ಷರು ಅದನ್ನು ಸರ್ಕಾರಕ್ಕೆ ಅಂಗೀಕಾರಕ್ಕಾಗಿ ಕಳುಹಿಸಿಕೊಡತಕ್ಕದ್ದು. ರಾಜೀನಾಮೆಯನ್ನು ಸರ್ಕಾರವು ಅಂಗೀಕರಿಸುವವರೆಗೆ ಅದು ಪರಿಣಾಮಕಾರಿಯಾಗತಕ್ಕದ್ದಲ್ಲ.

**7. ಪುನರ್ ನೇಮಕಕ್ಕೆ ಅರ್ಹತೆ.–** ಸದಸ್ಯತ್ವ ಅಂತ್ಯವಾಗಿರುವ ಯಾವೊಬ್ಬ ವ್ಯಕ್ತಿಯು, 4ನೇ ಪ್ರಕರಣದ ಅಡಿಯಲ್ಲಿ ಅನರ್ಹನಾಗಿದ್ದ ಹೊರತು, ಪುನರ್ ನೇಮಕಕ್ಕೆ ಅರ್ಹನಾಗಿರತಕ್ಕದ್ದು.

**8. ಖಾಲಿ ಸ್ಥಾನಗಳನ್ನು ಭರ್ತಿ ಮಾಡುವುದು.–** (1) ಪದನಿಮಿತ್ತ ಸದಸ್ಯನಲ್ಲದ ಮಂಡಳಿಯ ಒಬ್ಬ ಸದಸ್ಯನ ಸ್ಥಾನವು ಖಾಲಿ ಆದಲ್ಲಿ ಹಾಗೆ ಸ್ಥಾನವು ಖಾಲಿ ಆದ ತರುವಾಯ ಅದನ್ನು ಸಾಧ್ಯವಾದಷ್ಟು ಬೇಗನೇ, ಇನ್ನೊಬ್ಬ ಸದಸ್ಯನನ್ನು ನೇಮಕ ಮಾಡಿಕೊಳ್ಳುವ ಮೂಲಕ ಭರ್ತಿ ಮಾಡತಕ್ಕದ್ದು :

ಪರಂತು, 5ನೇ ಪ್ರಕರಣದ ಅಡಿಯಲ್ಲಿ ಅಂಥ ಸದಸ್ಯನ ಪದಾವಧಿಯು ಮುಕ್ತಾಯವಾಗುತ್ತಿದ್ದ ದಿನಾಂಕಕ್ಕೆ ಮುಂಚಿನ ಮೂರು ತಿಂಗಳೊಳಗೆ ಹಾಗೆ ಸದಸ್ಯರೊಬ್ಬರ ಪದವು ಖಾಲಿ ಆದಲ್ಲಿ ಅದನ್ನು ಭರ್ತಿಮಾಡತಕ್ಕದ್ದಲ್ಲ.

(2) (1)ನೇ ಉಪಪ್ರಕರಣದ ಅಡಿಯಲ್ಲಿ ನೇಮಕಗೊಂಡ ಸದಸ್ಯನು, ಯಾವ ಸದಸ್ಯನ ಸ್ಥಾನಕ್ಕೆ ತಾನು ನೇಮಕಗೊಂಡಿರುವನೋ ಆ ಸದಸ್ಯನ ಪದವು ಖಾಲಿ ಆಗಿರದಿದ್ದರೆ ಅವನು ಪದದಲ್ಲಿರುತ್ತಿದ್ದಂಥ ಉಳಿದ ಅವಧಿಯವರೆಗೆ ಪದಧಾರಣ ಮಾಡತಕ್ಕದ್ದು.

**9. ಅಧ್ಯಕ್ಷರ ಗೈರು ಹಾಜರಿ.–** ಅಧ್ಯಕ್ಷರು, ದುರ್ಬಲತೆ ಅಥವಾ ಅನ್ಯಥಾ ಕಾರಣದಿಂದ ತಮ್ಮ ಕರ್ತವ್ಯಗಳನ್ನು ನೆರವೇರಿಸಲು ಅಸಮರ್ಥರಾದರೆ ಅಥವಾ ರಜೆಯ ಮೇಲೆ ಗೈರು ಹಾಜರಾದರೆ ಅಥವಾ ಅನ್ಯಥಾ ಅಧ್ಯಕ್ಷರ ಪದವು ಖಾಲಿಯಾದರೆ ಉಪಾಧ್ಯಕ್ಷರು ಮತ್ತು ಅಧ್ಯಕ್ಷರು ಹಾಗೂ ಉಪಾಧ್ಯಕ್ಷರಿಬ್ಬರೂ ಇಲ್ಲದಿರುವ ಸಂದರ್ಭದಲ್ಲಿ, ಸರ್ಕಾರವು ನೇಮಕ ಮಾಡಬಹುದಾದಂಥ ವ್ಯಕ್ತಿಯು, ಅಧ್ಯಕ್ಷರಾಗಿ ಕಾರ್ಯನಿರ್ವಹಿಸತಕ್ಕದ್ದು.

**10. ಮಂಡಳಿಯ ಸಭೆಗಳು.–** (1) ಮಂಡಳಿಯು, ವಿನಿಯಮಗಳಲ್ಲಿ ಉಪಬಂಧಿಸಿದಂಥ ಕಾಲದಲ್ಲಿ ಮತ್ತು ಅಂಥ ಸ್ಥಳಗಳಲ್ಲಿ ತನ್ನ ಸಭೆಗಳನ್ನು ನಡೆಸತಕ್ಕದ್ದು ಮತ್ತು (2), (3), (4) ಮತ್ತು (5)ನೇ ಉಪಪ್ರಕರಣದ ಉಪಬಂಧಗಳಿಗೊಳಪಟ್ಟು, ವಿನಿಯಮಗಳಲ್ಲಿ ಉಪಬಂಧಿಸಬಹುದಾದಂಥ ಕಾರ್ಯವಿಧಾನವನ್ನು ತನ್ನ ಸಭೆಗಳಲ್ಲಿಯ ಕಾರ್ಯಕಲಾಪಗಳ ಸಂಬಂಧದಲ್ಲಿ ಅನುಸರಿಸತಕ್ಕದ್ದು.

(2) ಮಂಡಳಿಯು ಕನಿಷ್ಠ ಮೂರು ತಿಂಗಳಿಗೊಮ್ಮೆ ಸಭೆಯನ್ನು ನಡೆಸತಕ್ಕದ್ದು.

(3) ಅಧ್ಯಕ್ಷರು, ಹಾಗೂ ಅವರ ಗೈರುಹಾಜರಿಯಲ್ಲಿ ಉಪಾಧ್ಯಕ್ಷರು ಮತ್ತು ಅಧ್ಯಕ್ಷರು ಹಾಗೂ ಉಪಾಧ್ಯಕ್ಷರಿಬ್ಬರೂ ಗೈರುಹಾಜರಾದಲ್ಲಿ, ಹಾಜರಿದ್ದ ಸದಸ್ಯರು ತಮ್ಮ ಪೈಕಿಯಿಂದ ಆಯ್ಕೆ ಮಾಡುವ ಯಾವೊಬ್ಬ ವ್ಯಕ್ತಿಯು ಮಂಡಳಿಯ ಸಭೆಯ ಅಧ್ಯಕ್ಷತೆ ವಹಿಸತಕ್ಕದ್ದು.

(4) ಮಂಡಳಿಯ ಸಭೆಯಲ್ಲಿಯ ಎಲ್ಲ ಪ್ರಶ್ನೆಗಳನ್ನು ಹಾಜರಿದ್ದ ಮತ್ತು ಮತ ಚಲಾಯಿಸುವ ಸದಸ್ಯರ ಬಹುಮತದ ಮೂಲಕ ನಿರ್ಧರಿಸತಕ್ಕದ್ದು ಹಾಗೂ ಸಮಾನ ಮತಗಳು ಬಂದ ಸಂದರ್ಭದಲ್ಲಿ, ಅಧ್ಯಕ್ಷತೆ ವಹಿಸಿದ ವ್ಯಕ್ತಿಯು ಎರಡನೆಯ ಅಥವಾ ನಿರ್ಣಾಯಕ ಮತವನ್ನು ಹೊಂದಿರತಕ್ಕದ್ದು.

(5) ಸಭೆಯ ಕೋರಂ ಮಂಡಳಿಯ ಒಟ್ಟು ಸದಸ್ಯರ ಸಂಖ್ಯೆಯ ಶೇಕಡಾ ಐವತ್ತಕ್ಕಿಂತ ಕಡಿಮೆಯಿರತಕ್ಕದ್ದಲ್ಲ ಮತ್ತು ಅಂಥ ಸಭೆಯು ನಡೆಯುವ ಕಾಲಾವಧಿಯ ಉದ್ದಕ್ಕೂ ಕೋರಂ ಉಂಟಾಗುವಷ್ಟು ಸದಸ್ಯರು ಇರದ ಹೊರತು ಯಾವುದೇ ಸಭೆಯಲ್ಲಿ ಕಲಾಪಗಳನ್ನು ನಡೆಸತಕ್ಕದ್ದಲ್ಲ.

(6) ಮಂಡಳಿಯ ಸಭೆಗಳ ನಡವಳಿಗಳನ್ನು ಸರ್ಕಾರಕ್ಕೆ ಕಳುಹಿಸತಕ್ಕದ್ದು.

**11. ಮಂಡಳಿಯ ಸಮಿತಿ.–** (1) ಮಂಡಳಿಯು ಕಾಲಕಾಲಕ್ಕೆ ಮಂಡಳಿಯ ಒಬ್ಬರು ಅಥವಾ ಹೆಚ್ಚು ಸದಸ್ಯರುಗಳು ಮತ್ತು ಈ ಅಧಿನಿಯಮದಡಿಯಲ್ಲಿ ಕರ್ತವ್ಯಗಳನ್ನು ನಿರ್ವಹಿಸಲು ಮಂಡಳಿಗೆ ಸಲಹೆ ನೀಡಲು ನಿಯಮಿಸಲಾದಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಸರ್ಕಾರವು ಕಾಲಕಾಲಕ್ಕೆ ನಾಮನಿರ್ದೇಶಿಸಬಹುದಾದ ಇತರ ಸದಸ್ಯರುಗಳನ್ನೊಳಗೊಂಡ ಸಮಿತಿ ಅಥವಾ ಸಮಿತಿಗಳನ್ನು ರಚಿಸಬಹುದು.

(2) (1)ನೇ ಉಪಪ್ರಕರಣದಡಿಯಲ್ಲಿ ರಚಿತವಾದ ಸಮಿತಿಗಳ ಜೊತೆಗೆ ಮಂಡಳಿಯು, ಕಾಲಕಾಲಕ್ಕೆ ತನ್ನ ಸದಸ್ಯರ ಪೈಕಿಯಿಂದ, ಅಂಥ ಸಮಿತಿಗೆ ಅಥವಾ ಸಮಿತಿಗಳಿಗೆ ವಹಿಸಿಕೊಡಬಹುದಾದಂಥ ಕರ್ತವ್ಯಗಳು ಮತ್ತು ಪ್ರಕಾರ್ಯಗಳನ್ನು ನೆರವೇರಿಸುವ ಉದ್ದೇಶಕ್ಕಾಗಿ ತಾನು ಅವಶ್ಯಕವೆಂದು ಭಾವಿಸಬಹುದಾದಷ್ಟು ಅಂಥ ಸಂಖ್ಯೆಯ ಸದಸ್ಯರನ್ನೊಳಗೊಂಡ ಒಂದು ಅಥವಾ ಹೆಚ್ಚು ಸಮಿತಿಗಳನ್ನು ರಚಿಸಬಹುದು.

(3) (1) ಮತ್ತು (2)ನೇ ಉಪಪ್ರಕರಣಗಳ ಅಡಿಯಲ್ಲಿ ರಚಿಸಲಾದ ಸಮಿತಿಯು, ವಿನಿಯಮಗಳಲ್ಲಿ ಉಪಬಂಧಿಸಲಾದಂಥ ಕಾಲದಲ್ಲಿ ಮತ್ತು ಅಂಥ ಸ್ಥಳದಲ್ಲಿ ಸಭೆ ಸೇರತಕ್ಕದ್ದು ಮತ್ತು (ಕೋರಂ ಸೇರಿದಂತೆ) ವಿನಿಯಮಗಳಲ್ಲಿ ಉಪಬಂಧಿಸಬಹುದಾದಂತೆ ಕಾರ್ಯವಿಧಾನವನ್ನು ಅದರ ಸಭೆಗಳಲ್ಲಿ ಕಾರ್ಯಕಲಾಪಗಳ ಸಂಬಂಧದಲ್ಲಿ ಅನುಸರಿಸತಕ್ಕದ್ದು.

**12. ಸದಸ್ಯರಿಗೆ ಸಂದಾಯಮಾಡತಕ್ಕ ಫೀಜುಗಳು ಮತ್ತು ಭತ್ಯೆಗಳು.–** ಮಂಡಳಿಯು, ಸದಸ್ಯರುಗಳಿಗೆ, ಮಂಡಳಿಯ ಅಥವಾ ಸಮಿತಿಯ ಸಭೆಗಳಿಗೆ ಹಾಜರಾಗುವುಕ್ಕಾಗಿ ಮತ್ತು ಮಂಡಳಿಯ ಯಾವುದೇ ಕೆಲಸಕ್ಕೆ ಹಾಜರಾದುದಕ್ಕಾಗಿ, ನಿಯಮಿಸಬಹುದಾದಂಥ ಫೀಜುಗಳು ಮತ್ತು ಭತ್ಯೆಗಳನ್ನು ಸಂದಾಯ ಮಾಡತಕ್ಕದ್ದು.

**13. ಮಂಡಳಿಯ ಅಥವಾ ಸಮಿತಿಯ ಸದಸ್ಯರು ಕೆಲವೊಂದು ಸಂದರ್ಭಗಳಲ್ಲಿ ಮತ ಚಲಾಯಿಸುವಂತಿಲ್ಲ.–** (i) ಮಂಡಳಿಯ ಅಥವಾ ಅದರ ಸಮಿತಿಯ ಸಭೆಯಲ್ಲಿ ಯಾವುದೇ ರೀತಿಯಲ್ಲಿ ಪರಿಗಣನೆಗಾಗಿ ಬರುವ ವಿಷಯದಲ್ಲಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಹಣಕಾಸಿನ ಹಿತಾಸಕ್ತಿಯನ್ನು ಹೊಂದಿರುವ ; ಅಥವಾ

(ii) ತನ್ನ ಕಕ್ಷಿದಾರನ ಪರವಾಗಿ ವೃತ್ತಿ ಸಂಬಂಧವಾದ ಹಿತಾಸಕ್ತಿ ಹೊಂದಿರುವ ಅಥವಾ ಸರ್ಕಾರದ ಅಥವಾ ಸರ್ಕಾರದ ಸ್ವಾಮ್ಯದ ಅಥವಾ ನಿಯಂತ್ರಣದಲ್ಲಿರುವ ಉದ್ಯಮ ಸಂಸ್ಥೆಯ ಅಥವಾ ಸ್ಥಳೀಯ ಪ್ರಾಧಿಕಾರದ ಅಥವಾ ಕಾರ್ಮಿಕ ಸಂಘಗಳ ಅಧಿನಿಯಮ, 1926ರ ಅಡಿಯಲ್ಲಿ ನೋಂದಾಯಿತವಾದ ಒಂದು ಕಾರ್ಮಿಕ ಸಂಘದ ಅಥವಾ ಮಂಡಳಿಯ ನೌಕರರ ಯಾವುದೇ ವರ್ಗದ ಹಿತಾಸಕ್ತಿ ಅಥವಾ ಕಲ್ಯಾಣ ಕಾರ್ಯಗಳನ್ನು ಉತ್ತೇಜಿಸುವ ಉದ್ದೇಶಕ್ಕಾಗಿ ರಚಿತವಾದ ಸಂಘದ ಸದಸ್ಯನಾಗಿ ಅಲ್ಲದೆ ಯಾವೊಬ್ಬ ವ್ಯಕ್ತಿಯ ಏಜಂಟನಾಗಿ ಹಿತಾಸಕ್ತಿ ಹೊಂದಿರುವ,

– ಮಂಡಳಿಯ ಅಥವಾ ಅದರ ಒಂದು ಸಮಿತಿಯ ಸದಸ್ಯನು, ಸಂಬಂಧಪಟ್ಟ ಸನ್ನಿವೇಶಗಳು ಅವನ ತಿಳಿವಳಿಕೆಗೆ ಬಂದಕೂಡಲೇ ಸಾಧ್ಯವಾದಷ್ಟು ಬೇಗನೆ, ಅಂಥ ಸಭೆಯಲ್ಲಿ ತನ್ನ ಹಿತಾಸಕ್ತಿಯ ಸ್ವರೂಪವನ್ನು ಬಹಿರಂಗಪಡಿಸತಕ್ಕದ್ದು ಮತ್ತು ಹಾಗೆ ಬಹಿರಂಗಪಡಿಸಿದ ವಿಷಯವನ್ನು ಮಂಡಳಿಯ ಅಥವಾ ಸಂದರ್ಭಾನುಸಾರ ಸಮಿತಿಯ ನಡೆವಳಿ ಪುಸ್ತಕದಲ್ಲಿ ದಾಖಲು ಮಾಡತಕ್ಕದ್ದು ಮತ್ತು ಆ ವಿಷಯಕ್ಕೆ ಸಂಬಂಧಪಟ್ಟಂತೆ ಆ ಸದಸ್ಯನು ಮಂಡಳಿಯ ಅಥವಾ ಸಮಿತಿಯ ಯಾವುದೇ ಮಾತುಕತೆಗಳಲ್ಲಿ ಅಥವಾ ತೀರ್ಮಾನ ಕೈಗೊಳ್ಳುವುದರಲ್ಲಿ ಭಾಗವಹಿಸತಕ್ಕದ್ದಲ್ಲ.

**14. ನೇಮಕಾತಿಯಲ್ಲಿನ ನ್ಯೂನತೆಗಳು, ಕೈಗೊಂಡ ಕಾರ್ಯಗಳು ಇತ್ಯಾದಿಗಳನ್ನು ಅಸಿಂಧುಗೊಳಿಸದಿರುವುದು.–** ಮಂಡಳಿಯ ಅಥವಾ ಅದರ ಯಾವುದೇ ಸಮಿತಿಗಳ ಕಾರ್ಯ ಅಥವಾ ವ್ಯವಹರಣೆಯು ಕೇವಲ ಈ ಮುಂದಿನ ಕಾರಣಗಳಿಂದಾಗಿ, ಎಂದರೆ :–

(ಎ) ಯಾವುದೇ ಖಾಲಿಸ್ಥಾನ ಉಂಟಾದ ಅಥವಾ ಅದರ ರಚನೆಯಲ್ಲಿ ಯಾವುದೇ ನ್ಯೂನತೆ ಇರುವ ಕಾರಣದಿಂದ ; ಅಥವಾ

(ಬಿ) ಅದರ ಸದಸ್ಯನಾಗಿ ಕಾರ್ಯನಿರ್ವಹಿಸುತ್ತಿರುವ ಯಾವೊಬ್ಬ ವ್ಯಕ್ತಿಯು ಅನರ್ಹನಾದ ಅಥವಾ ಅವನ ನೇಮಕಾತಿಯಲ್ಲಿ ಯಾವುದೆ ನ್ಯೂನತೆ ಉಂಟಾದ ಕಾರಣದಿಂದ ; ಅಥವಾ

(ಸಿ) ಯಾವೊಬ್ಬ ಸದಸ್ಯನು, 13ನೇ ಪ್ರಕರಣವನ್ನು ಉಲ್ಲಂಘಿಸಿ ಯಾವುದೇ ವ್ಯವಹರಣೆಗಳಲ್ಲಿ ಕಾರ್ಯನಿರ್ವಹಿಸಿದ ಅಥವಾ ಅದರಲ್ಲಿ ಭಾಗವಹಿಸಿದ ಕಾರಣದಿಂದ ; ಅಥವಾ

(ಡಿ) ಪ್ರಕರಣದ ಅರ್ಹತೆಗಳಿಗೆ ಬಾಧಕವಾಗದಂತೆ ಅದರ ಕಾರ್ಯವಿಧಾನದಲ್ಲಿ ಯಾವುದೇ ನ್ಯೂನತೆ ಅಥವಾ ಕ್ರಮ ಬಾಹಿರತೆ ಉಂಟಾದ ಕಾರಣದಿಂದ,

– ಅಸಿಂಧುವಾಗತಕ್ಕದ್ದಲ್ಲ.

**15. ಅಧಿಕಾರಗಳ ಪ್ರತ್ಯಾಯೋಜನೆ.–** ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ಮಂಡಳಿಗೆ ಪ್ರದಾನ ಮಾಡಲಾದ ಅಥವಾ ವಿಧಿಸಲಾದಂಥ ಅಧಿಕಾರಗಳನ್ನು ಮತ್ತು ಕರ್ತವ್ಯಗಳನ್ನು ಮಂಡಳಿಯು, ಸರ್ಕಾರದ ಅನುಮೋದನೆಯೊಂದಿಗೆ, ಅಂಥ ನಿರ್ದೇಶನದಲ್ಲಿ ನಿರ್ದಿಷ್ಟ

ಪಡಿಸಬಹುದಾದಂಥ ನಿರ್ಬಂಧಗಳು ಮತ್ತು ಷರತ್ತುಗಳಿಗೆ ಒಳಪಟ್ಟು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯು ಸಹ ಚಲಾಯಿಸಬಹುದು ಅಥವಾ ನಿರ್ವಹಿಸಬಹುದು ಎಂದು ನಿರ್ದೇಶಿಸಬಹುದು :

ಪರಂತು, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯು, ಮಂಡಳಿಯ ಮೇಲ್ವಿಚಾರಣೆ ಮತ್ತು ನಿಯಂತ್ರಣಕ್ಕೆ ಒಳಪಟ್ಟು ನಿರ್ದೇಶನದಲ್ಲಿ ನಿರ್ದಿಷ್ಟಪಡಿಸಿದ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

**16. ಮಂಡಳಿಯ ಪ್ರಕಾರ್ಯಗಳು.–** (1) ಈ ಮುಂದಿನವುಗಳು ಮಂಡಳಿಯ ಕಡ್ಡಾಯ ಪ್ರಕಾರ್ಯ ಮತ್ತು ಕರ್ತವ್ಯಗಳಾಗಿರತಕ್ಕದ್ದು,–

(ಎ) ರಾಜ್ಯದಲ್ಲಿ ಬಂದರು ವಲಯಕ್ಕಾಗಿ ಯೋಜನೆಗಳನ್ನು ಪ್ರಾರಂಭಿಸುವುದು ಮತ್ತು ಅಭಿವೃದ್ಧಿಪಡಿಸುವುದು ಹಾಗೂ ಮಾರ್ಗದರ್ಶಕ ಸೂತ್ರಗಳನ್ನು ರಚಿಸುವುದು;

(ಬಿ) ರಾಜ್ಯದಲ್ಲಿ ಬಂದರುಗಳ ಬಳಕೆ, ಅಭಿವೃದ್ಧಿ ಮತ್ತು ಸುಧಾರಣೆಯನ್ನು ವೃದ್ಧಿಸುವುದು;

(ಸಿ) ರಾಜ್ಯದಲ್ಲಿ ಬಂದರುಗಳನ್ನು ಒದಗಿಸುವುದು, ನಿರ್ವಹಿಸುವುದು ಮತ್ತು ಕಾರ್ಯಾಚರಣೆ ಮಾಡುವುದು;

(ಡಿ) ಮಂಡಳಿಯು ಯುಕ್ತವೆಂದು ಭಾವಿಸಬಹುದಾದಂಥ ಸ್ಥಳಗಳಲ್ಲಿ ಸಾಕಷ್ಟು ಮತ್ತು ದಕ್ಷ ದೀಪಗೃಹಗಳು, ದೀಪಸ್ತಂಭಗಳು ಮತ್ತು ಇತರ ದೀಪವುಳ್ಳ ತೇಲು ಗುರುತುಗಳು ಮತ್ತು ಇತರ ನೌಕಾ ಸಂಚಾರ ಸಹಾಯ ಸಾಮಗ್ರಿಗಳ ಮತ್ತು ಸೇವೆಗಳನ್ನು ಒದಗಿಸುವುದು ಮತ್ತು ನಿರ್ವಹಿಸಿಕೊಂಡು ಬರುವುದು;

(ಇ) ರಾಜ್ಯದಲ್ಲಿ ಬಂದರುಗಳ ಮಿತಿಗಳೊಳಗೆ ಮತ್ತು ಬಂದರುಗಳ ಪ್ರವೇಶ ಮಾರ್ಗಗಳನ್ನು ವಿನಿಯಮಿಸುವುದು ಮತ್ತು ನಿಯಂತ್ರಿಸುವುದು;

(ಎಫ್) ಬಂದರಿನ ಮೂಲ ಸೌಕರ್ಯ ಮತ್ತು ಸೇವೆಗಳ ಸಂಬಂಧದಲ್ಲಿ ಲೈಸೆನ್ಸು ನೀಡಿಕೆ ಮತ್ತು ನಿಯಂತ್ರಕ ಪ್ರಕಾರ್ಯಗಳನ್ನು ನಿರ್ವಹಿಸುವುದು;

(ಜಿ) ಮೂರನೇ ಪಕ್ಷಕಾರರಿಗೆ ಕರಾರಿನ ಮೇಲೆ ವಹಿಸಿಕೊಟ್ಟಿರುವ ಕಾರ್ಯಗಳೂ ಸೇರಿದಂತೆ ರಾಜ್ಯದಲ್ಲಿ ಎಲ್ಲಾ ಬಂದರು ಕಾಮಗಾರಿಗಳ ಮೇಲ್ವಿಚಾರಣೆ ಮತ್ತು ನಿಯಂತ್ರಣವನ್ನು ನಿರ್ವಹಿಸುವುದು ;

(ಎಚ್) ಮಂಡಳಿಯು ಒದಗಿಸುವ ಸೇವೆಗಳಿಗಾಗಿ ಅಗತ್ಯವಾದಂತೆ ದರಗಳ ಶ್ರೇಣಿಯನ್ನು ರಚಿಸುವುದು ಅಥವಾ ಮಾರ್ಪಾಡು ಮಾಡುವುದು ಮತ್ತು ಅನುಮೋದಿಸುವುದು ;

(ಐ) ರಾಜ್ಯದಲ್ಲಿ ಸರಕುಗಳ ಮತ್ತು ಜನರ ಓಡಾಟಕ್ಕಾಗಿ ಸುರಕ್ಷಿತ, ಮಿತವ್ಯಯದ ಮತ್ತು ದಕ್ಷವಾದ ಕಡಲ ಸಾರಿಗೆ ವ್ಯವಸ್ಥೆಯನ್ನು ಒದಗಿಸುವುದಕ್ಕಾಗಿ ಯೋಜನೆ ಮಾಡುವುದು ಅಥವಾ ಅವಕಾಶ ಕಲ್ಪಿಸುವುದು ಅಥವಾ ಅಂಥ ವ್ಯವಸ್ಥೆಯನ್ನು ದೊರಕಿಸಿಕೊಳ್ಳುವುದು;

(ಜೆ) ಸರ್ಕಾರವು ಅಗತ್ಯಪಡಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಸಮಯಗಳಲ್ಲಿ, ಸರ್ಕಾರಕ್ಕೆ ತನ್ನ ಆಸ್ತಿ ಮತ್ತು ಚಟುವಟಿಕೆಗಳ ಸಂಬಂಧದಲ್ಲಿನ ಎಲ್ಲಾ ಮಾಹಿತಿಗಳನ್ನು ಒದಗಿಸುವುದು ;

(ಕೆ) ಸರ್ಕಾರದ ಅನುಮೋದನೆಯೊಡನೆ ಭಾರತೀಯ ಬಂದರುಗಳ ಅಧಿನಿಯಮದನ್ವಯ ರಾಜ್ಯದಲ್ಲಿ ಹೊಸ ಸಣ್ಣ ಬಂದರುಗಳನ್ನು ಅಭಿವೃದ್ಧಿ ಪಡಿಸುವುದು ;

(ಎಲ್) ಹಡಗನ್ನು ಕಟ್ಟುವುದು, ಹಡಗನ್ನು ಒಡೆದು ವಿಂಗಡಿಸುವುದು ಮತ್ತು ಸಂಬಂಧಿಸಿದ ಚಟುವಟಿಕೆಗಳಿಗಾಗಿ ಸೌಲಭ್ಯಗಳನ್ನು ಒದಗಿಸುವುದು ಮತ್ತು ಮೂಲಸೌಕರ್ಯವನ್ನು ಸೃಜಿಸುವುದು ;

(ಎಂ) ಕರ್ನಾಟಕ ರಾಜ್ಯದಲ್ಲಿ ಹಾಯ್ಗಡ ಸೇವೆಗಳು ಮತ್ತು ಒಳನಾಡು ಜಲ ಸಾರಿಗೆ ವ್ಯವಸ್ಥೆಯನ್ನು ನಿರ್ವಹಿಸಿಕೊಂಡುಬರುವುದು ಮತ್ತು ನಿಯಂತ್ರಿಸುವುದು ;

(ಎನ್) ಮೇಲಿನದಕ್ಕೆ ಪ್ರತಿಕೂಲ ಪ್ರಭಾವ ಬೀರದಂತೆ ರಾಜ್ಯದಲ್ಲಿ ಒಳನಾಡು ಜಲಸಾರಿಗೆ ವ್ಯವಸ್ಥೆಗೆ ಮತ್ತು ಬಂದರುಗಳ ದಕ್ಷ ಕಾರ್ಯಾಚರಣೆ ಮತ್ತು ಕಾರ್ಯ ನಿರ್ವಹಣೆಗೆ ಅವಶ್ಯಕವಾದದ್ದು ಎಂದು ಮಂಡಳಿಯು ಅಭಿಪ್ರಾಯ ಪಡುವಂಥ ಇತರ ಸೇವೆಗಳು ಮತ್ತು ಇತರ ಸೌಲಭ್ಯಗಳನ್ನು ಒದಗಿಸುವುದು ಅಥವಾ ಒದಗಿಸುವಂತೆ ನೋಡಿಕೊಳ್ಳುವುದು ;

(2) ಈ ಪ್ರಕರಣದ (1)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ನಿರ್ಬಂಧಕವಾದ ಕರ್ತವ್ಯಗಳ ಜೊತೆಗೆ, ಸರ್ಕಾರದಿಂದ ಅಥವಾ ಯಾವುದೇ ಸ್ಥಳೀಯ ಪ್ರಾಧಿಕಾರ ಇತ್ಯಾದಿಯಿಂದ ಅನುದಾನಗಳು ಅಥವಾ ಸಹಾಯದ್ರವ್ಯಗಳ ರೂಪದಲ್ಲಿ ಲಭ್ಯವಾಗುವ ನಿಧಿಗಳಿಗೊಳಪಟ್ಟು, ಮಂಡಳಿಯು ಈ ಮುಂದಿನ ಕರ್ತವ್ಯಗಳನ್ನು ನೆರವೇರಿಸಲು ಹಕ್ಕುಳ್ಳದ್ದಾಗಿರತಕ್ಕದ್ದು, ಎಂದರೆ:–

(ಎ) ಕರ್ನಾಟಕ ಕರಾವಳಿಯಲ್ಲಿ ನೆರೆಪರಿಹಾರ ಕಾರ್ಯಗಳು ಅಥವಾ ಪ್ರಕೃತಿ ವಿಪತ್ತು ತಡೆ ಕಾಮಗಾರಿಗಳನ್ನು ನೆರವೇರಿಸುವುದು;

(ಬಿ) ಕರ್ನಾಟಕ ಕರಾವಳಿಯಲ್ಲಿ ಮತ್ತು ಸುತ್ತಮುತ್ತ ಪ್ರದೇಶಗಳಲ್ಲಿ ಪ್ರವಾಸೋದ್ಯಮ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವುದು;

(ಸಿ) ಕರ್ನಾಟಕ ಕರಾವಳಿಯಲ್ಲಿ ಕಡಲುತೀರ ಸಂರಕ್ಷಣೆ ಕಾರ್ಯಗಳನ್ನು ಕೈಗೊಳ್ಳುವುದು ಮತ್ತು ಸಮುದ್ರ ಸವೆತವನ್ನು ತಡೆಗಟ್ಟುವುದು;

(ಡಿ) ರಾಜ್ಯದಲ್ಲಿ ಮೀನುಗಾರಿಕೆ ಬಂದರುಗಳನ್ನು ನಿರ್ಮಿಸುವುದು ಮತ್ತು ನಿರ್ವಹಿಸಿಕೊಂಡುಬರುವುದು ಹಾಗೂ ಮೀನುಗಾರಿಕೆ ಚಟುವಟಿಕೆಗಳನ್ನು ಪ್ರೋತ್ಸಾಹಿಸಲು ಅಗತ್ಯವಾದ ಮೂಲಸೌಕರ್ಯವನ್ನು ನಿರ್ಮಿಸುವುದು;

(ಇ) ಕರ್ನಾಟಕ ಕರಾವಳಿಯಲ್ಲಿ ಸಮುದ್ರತೀರ ಪೋಷಣೆಯನ್ನು (Beach norishment) ಕೈಗೊಳ್ಳುವುದು ;

(ಎಫ್) ಕರ್ನಾಟಕ ಕರಾವಳಿಗೆ ಸಂಬಂಧಿಸಿದ ಎಲ್ಲಾ ವಿಧದ ಕಾಮಗಾರಿಗಳನ್ನು ಮೇಲ್ವಿಚಾರಣೆ ಮಾಡುವುದು ಮತ್ತು ಕಾರ್ಯಗತಗೊಳಿಸುವುದು.

(3) (2)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಚಟುವಟಿಕೆಗಳನ್ನು ಮತ್ತು ಅದರ ಸಿಬ್ಬಂದಿ ವೆಚ್ಚವನ್ನು ಒಳಗೊಂಡಂತೆ ರಾಜ್ಯದಲ್ಲಿ ಯಾವುದೇ ಇತರ ಸೇವಾ ಮೂಲ ಕಾಮಗಾರಿಗಳನ್ನು ಕೈಗೊಳ್ಳಲು ಮಂಡಳಿಯ ಆದಾಯಕ್ಕಾಗಿ ಸಹಾಯ ದ್ರವ್ಯಗಳ ಅನುದಾನವಾಗಿ ಸರ್ಕಾರವು ಸೂಕ್ತ ಆಯವ್ಯಯ ಅವಕಾಶಗಳನ್ನು ಕಲ್ಪಿಸತಕ್ಕದ್ದು.

## ಅಧ್ಯಾಯ – III

## ಮಂಡಳಿಯ ಸಿಬ್ಬಂದಿ

**17. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಹಾಗೂ ಇತರ ಅಧಿಕಾರಿಗಳ ನೇಮಕ.–** (1) ರಾಜ್ಯ ಸರ್ಕಾರವು, ವಿನಿಯಮಗಳಲ್ಲಿ ನಿರ್ದಿಷ್ಟಪಡಿಸಲಾದಂತೆ ಬಂದರುಗಳ ಮತ್ತು ಒಳನಾಡು ಜಲಮಾರ್ಗಗಳ ಅಭಿವೃದ್ಧಿ, ಕಾರ್ಯಾಚರಣೆ, ನಿರ್ವಹಣೆ ಮತ್ತು ಆಡಳಿತದ ಅರ್ಹತೆ, ಅನುಭವ ಹಾಗೂ ಸಾಮರ್ಥ್ಯವಿದೆ ಎಂದು ತಾನು ಅಭಿಪ್ರಾಯ ಪಡುವಂಥ ವ್ಯಕ್ತಿಯನ್ನು ಮಂಡಳಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯಾಗಿ ನೇಮಕಮಾಡತಕ್ಕದ್ದು.

(2) ಮಂಡಳಿಯು, ತನ್ನ ಪ್ರಕಾರ್ಯಗಳನ್ನು ಸಮರ್ಥವಾಗಿ ನಿರ್ವಹಿಸುವುದಕ್ಕಾಗಿ, ಈ ಬಗ್ಗೆ ರಚಿಸಿರುವ ವಿನಿಯಮಗಳ ಅನುಸಾರವಾಗಿ ತಾನು ಅವಶ್ಯಕವೆಂದು ಪರಿಗಣಿಸುವಂಥ ಸಂಖ್ಯೆಯ ಅಧಿಕಾರಿಗಳ ಮತ್ತು ನೌಕರರ ಹುದ್ದೆಗಳನ್ನು ಸೃಜಿಸಬಹುದು ಮತ್ತು ನೇಮಿಸಬಹುದು.

(3) (2)ನೇ ಉಪಪ್ರಕರಣದಲ್ಲಿ ಏನೇ ಇದ್ದರೂ, 18ನೇ ಪ್ರಕರಣದ (2)ನೇ ಉಪಪ್ರಕರಣದ ನಿಬಂಧನೆಗನುಸಾರವಾಗಿ ತಯಾರಿಸಲಾದ ಮಂಡಳಿಯ ಸಿಬ್ಬಂದಿಗಳ ಅನುಸೂಚಿಯನ್ವಯ ಮಂಡಳಿಯು, ಸರ್ಕಾರದ ಪೂರ್ವಾನುಮೋದನೆಯೊಂದಿಗೆ ಯಾವುದೇ ಹುದ್ದೆಯನ್ನು ಸೃಜಿಸುವುದಕ್ಕಾಗಿ ಅಥವಾ ಯಾವುದೇ ಹುದ್ದೆಗೆ ಯಾವೊಬ್ಬ ವ್ಯಕ್ತಿಯನ್ನು ನೇಮಕ ಮಾಡುವುದಕ್ಕಾಗಿ ಮಂಜೂರಾತಿ ನೀಡಬಹುದು:

ಪರಂತು, ಭಾರತ ಬಂದರುಗಳ ಅಧಿನಿಯಮದಡಿಯಲ್ಲಿ ಯಾವುದೇ ಬಂದರಿನಲ್ಲಿ ಮಂಡಳಿಯಿಂದ ತತ್ಕಾಲದಲ್ಲಿ ಅಧಿಕೃತಗೊಂಡಿಲ್ಲದ ಯಾವೊಬ್ಬ ವ್ಯಕ್ತಿಯನ್ನು ಪೈಲೆಟ್ ನೌಕೆಗಳಿಗೆ ಪೈಲಟ್ ಎಂದು ನೇಮಿಸತಕ್ಕದ್ದಲ್ಲ.

**18. ಮಂಡಳಿಯ ನೌಕರರ ಷರತ್ತುಗಳು ಮತ್ತು ನಿಬಂಧನೆಗಳು.–** (1) ಮಂಡಳಿಯು ಕಾಲಕಾಲಕ್ಕೆ, ಸರ್ಕಾರದ ಪೂರ್ವಾನುಮೋದನೆಯೊಡನೆ, ಈ ಅಧಿನಿಯಮದ ಉದ್ದೇಶಗಳ ನಿರ್ವಹಣೆಗಾಗಿ ಅಗತ್ಯವಾದ ಮತ್ತು ಸರಿಯಾದುದೆಂದು ಮತ್ತು ತಾನು ಅವಶ್ಯಕವೆಂದು ಪರಿಗಣಿಸುವಂಥ ನೌಕರರ ಅನುಸೂಚಿಯನ್ನು ತಯಾರಿಸಬಹುದು ಮತ್ತು ಅಧಿಸೂಚಿಸಬಹುದು ಹಾಗೂ ಅಂಥ ಅನುಸೂಚಿಯಲ್ಲಿ ನೌಕರರ ಪದನಾಮಗಳನ್ನು ಮತ್ತು ಶ್ರೇಣಿಗಳನ್ನು ಸೂಚಿಸತಕ್ಕದ್ದು.

(2) ಮಂಡಳಿಯ ನೌಕರರ ವಿದ್ಯಾರ್ಹತೆ, ಪರಿಶ್ರಮಧನ, ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ಹಾಗೂ ನೇಮಕಾತಿ ವಿಧಾನ ಇವು ವಿನಿಯಮಗಳಲ್ಲಿ ನಿರ್ಧಿಷ್ಟ ಪಡಿಸಬಹುದಾದಂತೆ ಇರತಕ್ಕದ್ದು.

**19. ಮಂಡಳಿಯ ಸೇವೆಯೊಳಗೆ ನೌಕರರನ್ನು ವಿಲೀನಗೊಳಿಸುವಿಕೆ.–** (1) ಈ ಅಧಿನಿಯಮವು ಜಾರಿಗೆ ಬರುವಂಥ ದಿನಾಂಕದ ನಿಕಟ ಪೂರ್ವದಲ್ಲಿ ಸಣ್ಣ ಬಂದರುಗಳ, ಒಳನಾಡು ಜಲಸಾರಿಗೆಯ ಮತ್ತು ಕರಾವಳಿಯ ರಕ್ಷಣೆಗಾಗಿಯೇ ಅಥವಾ ಮುಖ್ಯವಾಗಿ ಅಥವಾ ಅದರ ಸಂಬಂಧದ ವ್ಯವಹಾರಗಳಲ್ಲಿ, ನೌಕರನಾಗಿ ಸೇವೆ ಸಲ್ಲಿಸುತ್ತಿದ್ದ ಪ್ರತಿಯೊಬ್ಬ ವ್ಯಕ್ತಿಯು, ಮಂಡಳಿಯ ಸೇವೆಗೆ ವಿಲೀನಗೊಳ್ಳದಿರುವ ಆಯ್ಕೆಯ ಅವಕಾಶವನ್ನು ಆತನು ಚಲಾಯಿಸದ ಹೊರತು, ಮಂಡಳಿಯ ನೌಕರನಾಗತಕ್ಕದ್ದು ಮತ್ತು ಅವನು ಆ ಹುದ್ದೆಯನ್ನು ಅದೇ ಪದಾವಧಿಗೆ ಹೊಂದಿರತಕ್ಕದ್ದು ಮತ್ತು ಮಂಡಳಿಯು ಸ್ಥಾಪನೆಯಾಗದಿದ್ದಲ್ಲಿ ಆತನು ಹೊಂದಿರಬಹುದಾದ ಅದೇ ಸೇವಾ ಷರತ್ತುಗಳು ಮತ್ತು ನಿಬಂಧನೆಗಳ ಮೇಲೆ ಮತ್ತು ವಯೋನಿವೃತ್ತಿಯಿಂದಾಗಲೀ ಅಥವಾ ವೈದ್ಯಕೀಯ ಅಸಿಂಧುತ್ವದಿಂದಾಗಲೀ, ವಜಾದಿಂದಾಗಲೀ, ತೆಗೆದುಹಾಕುವುದರಿಂದಾಗಲೀ ಅಥವಾ ಸ್ವಯಂ ನಿವೃತ್ತಿಯಿಂದಾಗಲೀ ಆತನು ನಿವೃತ್ತಿ ಹೊಂದುವವರೆಗೆ ಹಾಗೆಯೇ ಮುಂದುವರಿಯತಕ್ಕದ್ದು :

ಪರಂತು, ಮಂಡಳಿಯ ಸೇವೆಯಲ್ಲಿ ವಿಲೀನಗೊಳ್ಳದಿರುವ ಆಯ್ಕೆಯ ಅವಕಾಶವನ್ನು ಚಲಾಯಿಸುವ ನೌಕರನು ಮಂಡಳಿಯಲ್ಲಿ ನಿಯೋಜನೆಯ ಸೇವೆಯನ್ನು ಸಲ್ಲಿಸುವವನೆಂದು ಭಾವಿಸತಕ್ಕದ್ದು :

ಮತ್ತೂ ಪರಂತು, ಅಂಥ ನೌಕರನ ಪದಾವಧಿಯನ್ನು, ಪರಿಶ್ರಮಧನವನ್ನು ಹಾಗೂ ಸೇವಾ ನಿಬಂಧನೆಗಳು ಮತ್ತು ಷರತ್ತುಗಳನ್ನು ಸರ್ಕಾರದ ಪೂರ್ವಮಂಜೂರಾತಿಯ ಹೊರತು, ಆತನಿಗೆ ಪ್ರತಿಕೂಲವಾಗುವಂತೆ, ವ್ಯತ್ಯಾಸಗೊಳಿಸತಕ್ಕದ್ದಲ್ಲ.

(2) ಸರ್ಕಾರದಡಿಯಲ್ಲಿ ಸೇವೆಸಲ್ಲಿಸುತ್ತಿರುವ ನೌಕರರಿಗೆ ಅನ್ವಯವಾಗುವ, ಅಸ್ತಿತ್ವದಲ್ಲಿರುವ ಎಲ್ಲಾ ಸೇವಾ ನಿಯಮಗಳು, ಮಂಡಳಿಯಲ್ಲಿ ವಿಲೀನಗೊಂಡಿರುವ ಸರ್ಕಾರಿ ನೌಕರರಿಗೆ ಅನ್ವಯವಾಗುವುದು ಮುಂದುವರಿಯತಕ್ಕದ್ದು.

(3) ಮಂಡಳಿಯ ನೌಕರರ ರಜೆ ಮಂಜೂರು ಮಾಡುವ ಅಧಿಕಾರವು ಮಂಡಳಿಗೆ ಇರತಕ್ಕದ್ದು. ವಿನಿಯಮಗಳ ಅನುಸಾರವಾಗಿ ಮಂಡಳಿಯ ನೌಕರರ ಅಮಾನತು, ತೆಗೆದುಹಾಕುವಿಕೆ, ವಜಾ ಅಥವಾ ಸೇವೆಗಳಿಗೆ ಸಂಬಂಧಿಸಿದಂತೆ ಯಾವುದೇ ಇತರ ಪ್ರಶ್ನೆಗಳ ವಿಲೆಗಳ ಅಧಿಕಾರವನ್ನೂ ಮಂಡಳಿಯು ಹೊಂದಿರತಕ್ಕದ್ದು.

(4) ಕಾಲ ಕಾಲಕ್ಕೆ ತಿದ್ದುಪಡಿಯಾದಂಥ ಕರ್ನಾಟಕ ನಾಗರೀಕ ಸೇವಾ ನಿಯಮಗಳು, ಶಿಸ್ತು ಮತ್ತು ನಡತೆ ನಿಯಮಗಳನ್ನೊಳಗೊಂಡಂತೆ ಸೇವಾ ಷರತ್ತುಗಳನ್ನು ನಿಯಂತ್ರಿಸುವ ಇತರ ನಿಯಮಗಳಿಗೆ ಅನುಸಾರವಾಗಿ ಶ್ರೇಣಿಯಲ್ಲಿ ಇಳಿಕೆ, ತೆಗೆದುಹಾಕುವುದು ಅಥವಾ ವಜಾವನ್ನೊಳಗೊಂಡ ಆದೇಶದಿಂದ ಬಾಧಿತನಾದ ಮಂಡಳಿಯ ಯಾವುದೇ ಅಧಿಕಾರಿ ಅಥವಾ ನೌಕರನು, ವಿನಿಯಮಗಳಲ್ಲಿ ಉಪಬಂಧಿಸಿದಂಥ ಅಂಥ ಅವಧಿಯೊಳಗೆ ಮತ್ತು ಅಂಥ ಮಾದರಿಯಲ್ಲಿ, ಸರ್ಕಾರಕ್ಕೆ ಅಪೀಲು ಮಾಡಬಹುದು ಮತ್ತು ಸರ್ಕಾರದ ತೀರ್ಮಾನವು ಅಂತಿಮವಾಗಿರತಕ್ಕದ್ದು.

## ಅಧ್ಯಾಯ – IV

## ಸ್ವತ್ತು ಮತ್ತು ಕರಾರುಗಳು

20. **ಸರ್ಕಾರದ ಆಸ್ತಿಗಳು ಮತ್ತು ಹೊಣೆಗಾರಿಕೆಗಳನ್ನು ಮಂಡಳಿಗೆ ವರ್ಗಾಯಿಸುವುದು.–** ಯಾವುದೇ ಬಂದರಿಗೆ, ಒಳನಾಡು ಜಲಮಾರ್ಗಗಳು, ದೋಣಿ ಸೇವೆಗಳು ಮತ್ತು ಕರಾವಳಿ ರಕ್ಷಣಾ ಕೆಲಸಗಳಿಗೆ ಸಂಬಂಧಪಟ್ಟಂತೆ, ಗೊತ್ತುಪಡಿಸಿದ ದಿನದಿಂದ, –

(ಎ) ಅಂಥ ದಿನಕ್ಕೆ ನಿಕಟಪೂರ್ವದಲ್ಲಿ ಬಂದರಿನ, ಒಳನಾಡು ಜಲಮಾರ್ಗಗಳ, ದೋಣಿ ಸೇವೆಗಳು ಮತ್ತು ರಕ್ಷಣಾ ಕೆಲಸಗಳ ಉದ್ದೇಶಗಳಿಗಾಗಿ ಸರ್ಕಾರದಲ್ಲಿ ನಿಹಿತವಾದ ಎಲ್ಲ ಸ್ವತ್ತುಗಳನ್ನು, ಆಸ್ತಿಗಳನ್ನು ಮತ್ತು ನಿಧಿಗಳನ್ನು ಹಾಗೂ ದರಗಳ ವಿಧಿಸುವಿಕೆಗೆ ಇರುವ ಎಲ್ಲ ಹಕ್ಕುಗಳನ್ನು ಸರ್ಕಾರವು ಅನುಮೋದಿಸಿದ ಒಬ್ಬರು ಸ್ವತಂತ್ರ ಮೌಲ್ಯಮಾಪಕರು ಮೌಲ್ಯಮಾಪನ ಮಾಡತಕ್ಕದ್ದು ಮತ್ತು ಗೊತ್ತುಪಡಿಸಿದ ಅಂಥ ಮೌಲ್ಯಮಾಪನವು ಮಂಡಳಿಯಲ್ಲಿ ನಿಹಿತವಾಗತಕ್ಕದ್ದು ;

(ಬಿ) ವಹಿಸಲಾದ ಎಲ್ಲ ಋಣಗಳು, ಬಾಧ್ಯತೆಗಳು ಮತ್ತು ಹೊಣೆಗಾರಿಕೆಗಳು, ಮಾಡಿಕೊಂಡ ಎಲ್ಲಾ ಕರಾರುಗಳು ಮತ್ತು ಅಂಥ ದಿನದ ನಿಕಟಪೂರ್ವದಲ್ಲಿ ಸಣ್ಣ ಬಂದರುಗಳ, ಒಳನಾಡು ಜಲಮಾರ್ಗ, ದೋಣಿಸೇವೆಗಳು ಮತ್ತು ಕರಾವಳಿ ರಕ್ಷಣಾ ಕಾರ್ಯಗಳ ಉದ್ದೇಶಗಳಿಗಾಗಿ ಅಥವಾ ಅವುಗಳ ಸಂಬಂಧದಲ್ಲಿ ಸರ್ಕಾರದಿಂದ, ಅದರೊಂದಿಗೆ ಅಥವಾ ಅದಕ್ಕಾಗಿ ಮಾಡುವುದಕ್ಕೆ ತೊಡಗಿರುವ ಎಲ್ಲಾ ವಿಷಯಗಳನ್ನು ಮತ್ತು ಕಾರ್ಯಗಳನ್ನು ಮಂಡಳಿಯಿಂದ, ಅದರೊಂದಿಗೆ ಅಥವಾ ಅದಕ್ಕಾಗಿ ವಹಿಸಲಾಗಿದೆ, ಮಾಡಿಕೊಳ್ಳಲಾಗಿದೆ ಮತ್ತು ಮಾಡುವುದಕ್ಕೆ ತೊಡಗಲಾಗಿದೆ ಎಂದು ಭಾವಿಸತಕ್ಕದ್ದು ;

(ಸಿ) ಸಣ್ಣ ಬಂದರುಗಳ, ಒಳನಾಡು ಜಲಮಾರ್ಗಗಳ, ದೋಣಿ ಸೇವೆಗಳ ಮತ್ತು ಕರಾವಳಿ ರಕ್ಷಣಾ ಕಾರ್ಯಗಳ ಉದ್ದೇಶಗಳಿಗೆ ಸಂಬಂಧಪಟ್ಟಂತೆ, ರಾಜ್ಯ ಸರ್ಕಾರವು ಆ ದಿನದವರೆಗೂ ವಹಿಸಿಕೊಂಡಿರುವ ಮತ್ತು ಸರ್ಕಾರವು ಬಂಡವಾಳ ವೆಚ್ಚವೆಂದು ಘೋಷಿಸಿರುವ ಎಲ್ಲಾ ಅನಾವರ್ತಕ ವೆಚ್ಚಗಳನ್ನು ಸರ್ಕಾರವು ಮಂಡಳಿಗೆ ಒದಗಿಸಿದ ಮೂಲ ಬಂಡವಾಳ ಎಂದು ಪರಿಗಣಿಸತಕ್ಕದ್ದು.

(ಡಿ) ಸಣ್ಣ ಬಂದರಿನ, ಒಳನಾಡು ಜಲಮಾರ್ಗಗಳು, ದೋಣಿ ಸೇವೆಗಳು ಮತ್ತು ಕರಾವಳಿ ರಕ್ಷಣಾ ಕಾಮಗಾರಿಗಳ ಸಂಬಂಧದಲ್ಲಿ ಅಂಥ ದಿನಕ್ಕೆ ನಿಕಟಪೂರ್ವದಲ್ಲಿ ಸರ್ಕಾರಕ್ಕೆ ಬಾಕಿ ಇರುವ ಎಲ್ಲಾ ದರಗಳು, ಫೀಜುಗಳು, ಬಾಡಿಗೆಗಳು ಮತ್ತು ಇತರ ಹಣದ ಮೊತ್ತವು ಮಂಡಳಿಗೆ ಬಾಕಿ ಇರುವುದಾಗಿ ಭಾವಿಸತಕ್ಕದ್ದು.

(ಇ) ಸಣ್ಣ ಬಂದರು, ಒಳನಾಡು ಜಲ ಮಾರ್ಗಗಳು, ದೋಣಿ ಸೇವೆಗಳು ಮತ್ತು ಕರಾವಳಿ ರಕ್ಷಣೆ ಕಾರ್ಯಗಳಿಗೆ ಸಂಬಂಧಿಸಿದ ಯಾವುದೇ ವಿಷಯಕ್ಕೆ ಸಂಬಂಧಿಸಿದಂತೆ ಅಂಥ ದಿನಕ್ಕೆ ನಿಕಟಪೂರ್ವದಲ್ಲಿ ಸರ್ಕಾರದಿಂದ ಅಥವಾ ವಿರುದ್ಧವಾಗಿ ಹೂಡಲಾದ ಎಲ್ಲಾ ದಾವೆಗಳು ಮತ್ತು ಇತರ ಕಾನೂನು ವ್ಯವಹರಣೆಗಳನ್ನು, ಮಂಡಳಿಯಿಂದ ಅಥವಾ ವಿರುದ್ಧವಾಗಿ ಮುಂದುವರಿಸಬಹುದು.

**21. ಈಗ ಇರುವ ದರ ಮುಂತಾದವುಗಳನ್ನು ಮಂಡಳಿಯು ಬದಲಾಯಿಸುವವರೆಗೆ ಮುಂದುವರೆಸುವುದು.–** ಯಾವುದೇ ಸಣ್ಣ ಬಂದರಿಗೆ, ಒಳನಾಡು ಜಲ ಸೇವೆಗಳಿಗೆ ಮತ್ತು ದೋಣಿ ಸೇವೆಗಳಿಗೆ ಸಂಬಂಧಿಸಿದಂತೆ ಎಲ್ಲ ದರಗಳು, ಫೀಜುಗಳು ಮತ್ತು ಇತರ ಶುಲ್ಕಗಳನ್ನು, ಗೊತ್ತುಪಡಿಸಿದ ದಿನಾಂಕದಿಂದ, ಈ ಅಧಿನಿಯಮದ ಉಪಬಂಧಗಳಿಗನುಸಾರ ಸಕ್ಷಮ ಪ್ರಾಧಿಕಾರವು ವ್ಯತ್ಯಾಸಮಾಡದ ಹೊರತು ಮತ್ತು ಆವರೆಗೆ, ಅಂಥ ದಿನಾಂಕಕ್ಕೆ ಮೊದಲು ಸರ್ಕಾರವು ವಿಧಿಸುತ್ತಿದ್ದ ಮತ್ತು ಸಂಗ್ರಹಿಸುತ್ತಿದ್ದ ದರದಲ್ಲಿಯೇ ವಿಧಿಸುವುದು ಮತ್ತು ಸಂಗ್ರಹಿಸುವುದು ಮುಂದುವರೆಯತಕ್ಕದ್ದು.

**22. ಬಡ್ಡಿಸಹಿತ ಬಂಡವಾಳದ ಮರುಸಂದಾಯ.–** ಮಂಡಳಿಯು, 20ನೇ ಪ್ರಕರಣದ (1)ನೇ ಉಪಪ್ರಕರಣದ (ಸಿ) ಖಂಡದ ಅಡಿಯಲ್ಲಿ ಬಂಡವಾಳವೆಂದು ಪರಿಗಣಿಸಲಾದ, ಸರ್ಕಾರವು ಒದಗಿಸಿದ ಮೊತ್ತವನ್ನು, ಸರ್ಕಾರವು ನಿರ್ಧರಿಸಬಹುದಾದಂಥ ಅವಧಿಯೊಳಗೆ ಮತ್ತು ಅಂಥ ನಿಬಂಧನೆ ಮತ್ತು ಷರತ್ತುಗಳ ಮೇಲೆ ಸರ್ಕಾರವು ನಿಗದಿಪಡಿಸಬಹುದಾದಂಥ ದರದಲ್ಲಿ ಬಡ್ಡಿಯೊಡನೆ ಮರುಸಂದಾಯ ಮಾಡತಕ್ಕದ್ದು ಮತ್ತು ಅಂಥ ಬಂಡವಾಳದ ಮರುಸಂದಾಯವು ಅಥವಾ ಬಡ್ಡಿಯ ಸಂದಾಯವು, ಮಂಡಳಿಯ ವೆಚ್ಚದ ಒಂದು ಭಾಗವಾಗಿದೆ ಎಂದು ಭಾವಿಸತಕ್ಕದ್ದು.

**23. ಒಪ್ಪಂದದ ಮೂಲಕ ಸ್ಥಿರ ಸ್ವತ್ತನ್ನು ಆರ್ಜಿಸಲಾಗದಿದ್ದಾಗ ಕಾರ್ಯವಿಧಾನ.–** ಮಂಡಳಿಯ ಉದ್ದೇಶಗಳಿಗಾಗಿ ಯಾವುದೇ ಸ್ಥಿರ ಸ್ವತ್ತಿನ ಅಗತ್ಯವಿದ್ದಲ್ಲಿ ಮಂಡಳಿಯ ಕೋರಿಕೆಯ ಮೇಲೆ, ಸರ್ಕಾರವು, ಭೂ ಆರ್ಜನಾ ಅಧಿನಿಯಮ, 1894ರ ಉಪಬಂಧಗಳ ಅಥವಾ ಅನ್ವಯವಾಗತಕ್ಕ ಯಾವುದೇ ಇತರೆ ಕಾನೂನುಗಳ ಅಡಿಯಲ್ಲಿ ಅದರ ಆರ್ಜನೆಯನ್ನು ಪಡೆದುಕೊಳ್ಳಬಹುದು.

**24. ಮಂಡಳಿಯಿಂದ ಕರಾರುಗಳು.–** ಈ ಅಧಿನಿಯಮದ ಉದ್ದೇಶಗಳಿಗಾಗಿ ಮಂಡಳಿಯು ಕರಾರನ್ನು ಮಾಡಿಕೊಳ್ಳುವುದಕ್ಕೆ ಸಂಬಂಧಿಸಿದಂತೆ, ಈ ಮುಂದಿನ ಉಪಬಂಧಗಳು ಪರಿಣಾಮಕಾರಿಯಾಗಿರತಕ್ಕದ್ದು, ಎಂದರೆ:–

(ಎ) ಪ್ರತಿಯೊಂದು ಕರಾರನ್ನು ಮಂಡಳಿಯ ಪರವಾಗಿ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯು ಅಥವಾ ಮಂಡಳಿಯು ಪ್ರಾಧಿಕರಿಸಿದ ಅಧಿಕಾರಿಯು ಮಾಡಿಕೊಳ್ಳತಕ್ಕದ್ದು. ಸರೋವರ, ಬಂದರು ಕಾಪು, ಜಲಮಾರ್ಗ ಮತ್ತು ಅದಕ್ಕೆ ಸಂವಾದಿಯಾದ ಮೂಲ ಸೌಲಭ್ಯಗಳ ಗುತ್ತಿಗೆಯ ಸಂಬಂಧದಲ್ಲಿ ಸರ್ಕಾರವು ಸೂಕ್ತವೆಂದು ಭಾವಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಅದರ ಪೂರ್ವಾನುಮೋದನೆಯನ್ನು ಪಡೆಯದ ಹೊರತು ಯಾವುದೇ ಕರಾರನ್ನು ಐದು ವರ್ಷಗಳಿಗೆ ಮೀರುವ ಅವಧಿಗಾಗಿ, ಮಾಡಿಕೊಳ್ಳತಕ್ಕದ್ದಲ್ಲ;

(ಬಿ) ಸ್ಥಿರ ಸ್ವತ್ತಿನ ಆರ್ಜನೆ ಅಥವಾ ಮಾರಾಟಕ್ಕಾಗಿ ಅಥವಾ ಐದು ವರ್ಷಗಳಿಗೆ ಮೀರಿದ ಅವಧಿಗಾಗಿ, ಅದಕ್ಕೆ ಸರ್ಕಾರದ ಪೂರ್ವಾನುಮೋದನೆಯನ್ನು ಪಡೆಯದ ಹೊರತು ಅಂಥ ಯಾವುದೇ ಸ್ವತ್ತಿನ ಗುತ್ತಿಗೆಗಾಗಿ ಯಾವುದೇ ಕರಾರನ್ನು ಮಾಡಿಕೊಳ್ಳತಕ್ಕದ್ದಲ್ಲ ;

(ಸಿ) ಮಂಡಳಿಯ ಪರವಾಗಿ ಕರಾರುಗಳನ್ನು ಬರೆದುಕೊಡುವ ನಮೂನೆ ಮತ್ತು ವಿಧಾನವು ನಿಯಮಿಸಲಾದಂತೆ ಇರತಕ್ಕದ್ದು.

## ಅಧ್ಯಾಯ – V

## ಮಂಡಳಿಯು ಬಂದರಿನಲ್ಲಿ ಒದಗಿಸಬೇಕಾದ ಕಾಮಗಾರಿಗಳು ಮತ್ತು ಸೇವೆಗಳು

**25. ಕಾಮಗಾರಿಗಳನ್ನು ನಿರ್ವಹಿಸುವುದಕ್ಕೆ ಮತ್ತು ಸಾಮಗ್ರಿಗಳನ್ನು ಒದಗಿಸುವುದಕ್ಕೆ ಮಂಡಳಿಯ ಅಧಿಕಾರಗಳು.–** (1) ಮಂಡಳಿಯು, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿಗೊಳಪಟ್ಟು, ಬಂದರುಗಳ ಪರಿಮಿತಿಗಳೊಳಗೆ ಅಥವಾ ಪರಿಮಿತಿಗಳ ಹೊರಗೆ, ತಾನು ಯುಕ್ತವೆಂದು ಅಥವಾ ಅವಶ್ಯವೆಂದು ಭಾವಿಸಬಹುದಾದಂಥ ಕಾಮಗಾರಿಗಳನ್ನು ನಿರ್ವಹಿಸಬಹುದು ಮತ್ತು ಸಾಮಗ್ರಿಗಳನ್ನು ಒದಗಿಸಬಹುದು.

(2) ಅಂಥ ಕಾಮಗಾರಿಗಳು ಮತ್ತು ಸಾಮಗ್ರಿಗಳು,–

(ಎ) ಬಂದರಿನ ಒಳಗಡೆ ಅಥವಾ ಬಂದರು ಜಲಮಾರ್ಗಗಳು ಅಥವಾ ಬಂದರಿನ ಮುಂಗರೆಯ ಅಥವಾ ರಾಜ್ಯದಲ್ಲಿಯ ಬಂದರು ಜಲಮಾರ್ಗದ ಮೇಲೆ ಇರುವ, ಅಂಥ ಎಲ್ಲ ಅನುಕೂಲಕರವಾದ ಕಮಾನುಗಳು, ಟ್ರಾಂಗಳು, ಸರಕು ಇಳಿಸುವ ಸ್ಥಳಗಳು, ಮೆಟ್ಟಿಲುಗಳು, ಬೇಲಿಗಳು, ರಸ್ತೆಗಳು, ಸೇತುವೆಗಳು, ಸುರಂಗಗಳು ಮತ್ತು ಸಂಪರ್ಕಗಳು ಮತ್ತು ಮಂಡಳಿಯು ಅವಶ್ಯವೆಂದು ಪರಿಗಣಿಸಬಹುದಾದಂತೆ ಮಂಡಳಿಯ ನೌಕರರ ನಿವಾಸಕ್ಕಾಗಿ ಅಗತ್ಯವಾದ ಕಟ್ಟಡಗಳ ಸಹಿತವಾಗಿ ಸರಕುಕಟ್ಟೆಗಳು, ಬಂದರುಕಟ್ಟೆಗಳು, ಹಡಗುಕಟ್ಟೆ, ಸ್ಟೇಜ್‌ಗಳು, ಬಂದರು ಕಾಪುಗಳು, ಹಡಗು ಇಳಿದಾಣಗಳು, ಲಂಗರು ಹಾಕುವ ಸ್ಥಳ ಮತ್ತು ಇತರ ಕಾಮಗಾರಿಗಳು;

(ಬಿ) ಬಸ್‌ಗಳು, ಪ್ರಯಾಣ ಸಾಧನಗಳು, ರೋಲಿಂಗ್‌ಸ್ಟಾಕ್‌ಗಳು, ಷೆಡ್‌ಗಳು, ಹೋಟೆಲ್‌ಗಳು, ಉಗ್ರಾಣಗಳು ಮತ್ತು ಪ್ರಯಾಣಿಕರಿಗಾಗಿ ಮತ್ತು ಸರಕುಗಳಿಗಾಗಿ ಇತರ ಸ್ಥಳಾವಕಾಶ ಮತ್ತು ಪ್ರಯಾಣಿಕರನ್ನು ಸಾಗಿಸುವುದಕ್ಕಾಗಿ ಮತ್ತು ಇಳಿಸಲಾದ ಅಥವಾ ಹಡಗಿಗೆ ತುಂಬುವ ಅಥವಾ ಅನ್ಯಥಾ ಸಾಗಿಸುವುದಕ್ಕಾಗಿ, ಸ್ವೀಕರಿಸುವುದಕ್ಕಾಗಿ ಮತ್ತು ದಾಸ್ತಾನು ಮಾಡುವುದಕ್ಕಾಗಿ ಇತರ ಸರಕುಗಳು ;

(ಸಿ) ನೌಕೆಗಳಿಗೆ ಸರಕುಗಳನ್ನು ಹೇರುವುದಕ್ಕಾಗಿ ಮತ್ತು ಇಳಿಸುವುದಕ್ಕಾಗಿ ಸ್ಥಾಯಿ ಲಂಗರು ಮತ್ತು ಕ್ರೇನುಗಳು, ಸ್ಕೇಲುಗಳು ಮತ್ತು ಎಲ್ಲ ಇತರ ಅವಶ್ಯಕ ಸಾಧನೆಗಳು ;

(ಡಿ) ಅಧಿನಿಯಮದ ಮೂಲಕ ಅಥವಾ ಈ ಅಧಿನಿಯಮದ ಉದ್ದೇಶಕ್ಕಾಗಿ ಅನ್ಯಥಾ ಪ್ರಾಧಿಕರಿಸಲಾದ ಕಾಮಗಾರಿಗಳ ನಿರ್ವಹಣೆಗಾಗಿ ಅವಶ್ಯಕವಾಗಬಹುದಾದ ಬಂದರಿನ ಮುಂಗರೆಯ ಅಥವಾ ಬಂದರು ಜಲಮಾರ್ಗದ ಯವುದೇ ಭಾಗದಲ್ಲಿ ಹೂಳೆತ್ತುವುದು, ಸುಧಾರಿಸುವುದು, ಅಗೆಯುವುದು, ಜೋಡಿಸುವುದು ಮತ್ತು ಅದನ್ನು ಮೇಲೆತ್ತುವುದು ;

(ಇ) ಬಂದರಿನ ರಕ್ಷಣೆಗಾಗಿ ಯುಕ್ತವಾಗಬಹುದಾದಂಥ ಅಲೆತಡೆ ಮತ್ತು ಇತರ ಕಾಮಗಾರಿಗಳು;

(ಎಫ್) ಬಂದರಿನ ಅಥವಾ ಬಂದರು ಜಲಮಾರ್ಗಗಳ ಅಥವಾ ಬಂದರಿನ ಅಥವಾ ಬಂದರು ಜಲಮಾರ್ಗಗಳ ಮುಂಗರೆಯ ಯಾವುದೇ ಭಾಗವನ್ನು ಸ್ವಚ್ಛಮಾಡುವುದಕ್ಕಾಗಿ, ಅಗಲಮಾಡುವುದಕ್ಕಾಗಿ, ಆಳಮಾಡುವುದಕ್ಕಾಗಿ ಮತ್ತು ಸುಧಾರಿಸುವುದಕ್ಕಾಗಿ ಹೂಳೆತ್ತುವ ಮತ್ತು ಇತರ ಯಂತ್ರಗಳು ;

(ಜಿ) ರಾಜ್ಯದ ಪ್ರಕಾರ್ಯಗಳಿಗೆ ಸಂಬಂಧಪಡುವಷ್ಟರ ಮಟ್ಟಿಗೆ, ಲೈಟ್‌ಹೌಸ್‌ಗಳು, ಲೈಟ್‌ಷಿಪ್‌ಗಳು, ಕಾವಲು ಗೋಪುರಗಳು, ತೇಲುಬುರುಡೆಗಳು, ಮಾರ್ಗದರ್ಶಕ ದೋಣಿಗಳು ಮತ್ತು ಬಂದರು ಜಲಮಾರ್ಗಗಳ ಸುರಕ್ಷಿತ ಜಲಸಾರಿಗೆಗಾಗಿ ಅವಶ್ಯಕವಾದ ಇತರ ಸಾಮಗ್ರಿಗಳು ;

(ಹೆಚ್) ಬಂದರನ್ನು ಪ್ರವೇಶಿಸುವ ಅಥವಾ ಹೊರಡುವ ಅಥವಾ ಇತರಕಡೆಗೆ ಹೊರಡಲಿರುವ ಯಾವುದೇ ನೌಕೆಯನ್ನು ಬಂದರು ಜಲಮಾರ್ಗದಲ್ಲಿ ಎಳೆದುಕೊಂಡು ಹೋಗುವ ಅಥವಾ ನೆರವು ಒದಗಿಸುವ ಉದ್ದೇಶಕ್ಕಾಗಿ ಮತ್ತು ಜೀವ ಮತ್ತು ಸ್ವತ್ತನ್ನು ಉಳಿಸುವ ಅಥವಾ ರಕ್ಷಿಸುವ ಉದ್ದೇಶಕ್ಕಾಗಿ ಮತ್ತು 32ನೇ ಪ್ರಕರಣದ ಅಡಿಯಲ್ಲಿ ಪ್ರಯಾಣಿಕರನ್ನು ಅಥವಾ ಸರಕುಗಳನ್ನು ಇಳಿಸುವ, ಹಡಗಿಗೆ ತುಂಬುವ ಅಥವಾ ಸಾಗಣೆಮಾಡುವ

ಉದ್ದೇಶಕ್ಕಾಗಿ, ಪ್ರಾದೇಶಿಕ ಅಧೀನ ಜಲ ಪ್ರದೇಶವಾಗಿರಲಿ ಅಥವಾ ಅನ್ಯಥಾ ಆಗಿರಲಿ, ಬಂದರಿನ ಪರಿಮಿತಿಗಳೊಳಗೆ ಅಥವಾ ಆ ಪರಿಮಿತಿಗಳ ಹೊರಗೆ ಉಪಯೋಗಕ್ಕಾಗಿ ನೌಕೆಗಳು, ಕರ್ಷಕ ನೌಕೆಗಳು (ಟಗ್ಸ್), ದೋಣಿಗಳು, ಹರಿಗೋಲುಗಳು ಮತ್ತು ಲಾಂಚ್‌ಗಳು ಮತ್ತು ಲೈಟ್‌ಗಳು ;

(ಐ) ಬಂದರಿನಲ್ಲಿ ನೀರು ಸರಬರಾಜಿನ ಉದ್ದೇಶಕ್ಕಾಗಿ, ಕೊಳವೆ ಬಾವಿ ಕೊರೆಯುವುದು ಮತ್ತು ಸಲಕರಣೆಗಳು, ದೋಣಿಗಳ ಬಾರ್ಜ್‌ಗಳ ಮತ್ತು ಇತರ ಪರಿಕರಗಳನ್ನು ಸಜ್ಜುಗೊಳಿಸುವುದು, ನಿರ್ವಹಿಸುವುದು ಮತ್ತು ಉಪಯೋಗಿಸುವುದು ;

(ಜೆ) ಬೆಂಕಿಯನ್ನು ಶಮನಗೊಳಿಸುವುದಕ್ಕಾಗಿ ಅವಶ್ಯಕವಾದ ಯಂತ್ರಗಳು ಮತ್ತು ಇತರ ಸಾಮಗ್ರಿಗಳು ;

(ಕೆ) ಖಾರಿ (ಕರಾವಳಿ ಒಳಚಾಚು (ಕ್ರೀಕ್ಸ್)) ಭೂಮಿ ಸೇರಿದಂತೆ ಸಮುದ್ರತೀರಕ್ಕೆ ಸೇರಿಕೊಂಡಿರುವ ಭೂಮಿಗಳು ;

(ಎಲ್) ಕರ್ನಾಟಕ ರಾಜ್ಯದಲ್ಲಿ ಬಂದರುಗಳಲ್ಲಿ ಅಥವಾ ನಡುವೆ, ಹರಿಗೋಲು ದೋಣಿ ಸಂಚಾರಕ್ಕಾಗಿ, ಹರಿಗೋಲು ಮತ್ತು ಇತರ ಕಾಮಗಾರಿಗಳು ಮತ್ತು ಸಂಬಂಧಿಸಿದ ಸಲಕರಣೆಗಳು ;

(ಎಂ) ಜಲವಿಜ್ಞಾನ ಅಧ್ಯಯನಗಳನ್ನು ನಡೆಸುವುದಕ್ಕಾಗಿ ಮಾದರಿಗಳು ಮತ್ತು ನಕ್ಷೆಗಳ ನಿರ್ಮಾಣ ;

(ಎನ್) ನೌಕೆಗಳು, ಕರ್ಷಕ ನೌಕೆಗಳು (ಟಗ್ಸ್), ದೋಣಿಗಳು, ಯಂತ್ರಗಳು ಮತ್ತು ಇತರ ಸಾಮಗ್ರಿಗಳನ್ನು ದುರಸ್ತಿಮಾಡುವುದಕ್ಕಾಗಿ ಅಥವಾ ಪರೀಕ್ಷಿಸುವುದಕ್ಕಾಗಿ ಶುಷ್ಕ ಹಡಗುಕಟ್ಟೆ, ಇಳಿಜಾರುಕಟ್ಟೆ, ದೋಣಿ ಹಡಗುಕಟ್ಟೆ ಮತ್ತು ಕಾರ್ಯಾಗಾರಗಳು ;

(ಒ) ರಾಜ್ಯದಲ್ಲಿ ಬಂದರು ವಲಯಗಳಿಗಾಗಿ ಯೋಜನೆಗಳನ್ನು ಪ್ರಾರಂಭಿಸುವುದು ಮತ್ತು ಅಭಿವೃದ್ಧಿಪಡಿಸುವುದು ಹಾಗೂ ಮಾರ್ಗಸೂಚಿಗಳನ್ನು ತಯಾರಿಸುವುದು;

(ಪಿ) ರಾಜ್ಯದಲ್ಲಿ ಬಂದರುಗಳ ಉಪಯೋಗಕ್ಕಾಗಿ ಪ್ರೋತ್ಸಾಹಿಸುವುದು, ಅಭಿವೃದ್ಧಿಪಡಿಸುವುದು ಹಾಗೂ ಸುಧಾರಿಸುವುದು;

(ಕ್ಯೂ) ರಾಜ್ಯದಲ್ಲಿ ಬಂದರುಗಳನ್ನು ಒದಗಿಸುವುದು, ನಿರ್ವಹಿಸುವುದು ಹಾಗೂ ಕೆಲಸ ಮಾಡುವುದು;

(ಆರ್) ಮಂಡಳಿಯು, ತಾನು ಯುಕ್ತವೆಂದು ಭಾವಿಸುವಂಥ ಸ್ಥಳಗಳಲ್ಲಿ ಸಾಕಷ್ಟು ಮತ್ತು ಸಮರ್ಥವಾದ ದೀಪಗೃಹಗಳು, ದೀಪಸ್ತಂಭಗಳು ಮತ್ತು ಇತರ ದೀಪಗಳ ತೇಲುಗುರುತುಗಳು ಮತ್ತು ಇತರ ನೌಕಾ ಸಂಚಾರಕ ಸಹಾಯಕ ಸಾಮಗ್ರಿಗಳು ಮತ್ತು ಸೇವೆಗಳನ್ನು ಒದಗಿಸುವುದು ಮತ್ತು ನಿರ್ವಹಿಸುವುದು;

(ಎಸ್) ರಾಜ್ಯದಲ್ಲಿ ಬಂದರು ಮತ್ತು ಬಂದರುಗಳ ಸಂಪರ್ಕ ಮಾರ್ಗಗಳ ಪರಿಮಿತಿಯೊಳಗೆ ನೌಕಾಸಂಚಾರವನ್ನು ವಿನಿಯಮಿಸುವುದು ಮತ್ತು ನಿಯಂತ್ರಿಸುವುದು;

(ಟಿ) ಬಂದರಿನ ಮೂಲ ಸೌಕರ್ಯ ಮತ್ತು ಸೇವೆಗಳ ಸಂಬಂಧದಲ್ಲಿ ಲೈಸೆನ್ಸು ನೀಡುವುದು ಮತ್ತು ನಿಯಂತ್ರಕ ಪ್ರಕಾರ್ಯಗಳನ್ನು ಚಲಾಯಿಸುವುದು;

(ಯು) ಮೂರನೇ ಪಕ್ಷಕಾರರಿಗೆ ಹೊರಗುತ್ತಿಗೆಯನ್ನು ನೀಡಿರುವ ಕೆಲಸಗಳೂ ಒಳಗೊಂಡಂತೆ ರಾಜ್ಯದಲ್ಲಿನ ಎಲ್ಲಾ ಬಂದರು ಕೆಲಸಗಳ ಮೇಲ್ವಿಚಾರಣೆಯನ್ನು ನಡೆಸುವುದು ಮತ್ತು ನಿಯಂತ್ರಣ ಮಾಡುವುದು;

(ವಿ) ಮಂಡಳಿಯಿಂದ ಒದಗಿಸಲಾದ ಸೇವೆಗಳಿಗೆ ದರಗಳ ಶ್ರೇಣಿಗೆ ಅಗತ್ಯವಾದಂತೆ ಮಾರ್ಪಾಟುಗಳನ್ನು ಮಾಡುವುದು ಮತ್ತು ಅನುಮೋದಿಸುವುದು;

(ಡಬ್ಲ್ಯು) ರಾಜ್ಯದಲ್ಲಿ ಸರಕುಗಳ ಮತ್ತು ಜನರ ಚಲನವಲನಕ್ಕಾಗಿ, ಸುರಕ್ಷಿತವಾದ, ಮಿತವ್ಯಯಕಾರಿಯಾದ ಮತ್ತು ಸಮರ್ಥ ಸಮುದ್ರ ಸಾರಿಗೆ ಪದ್ಧತಿಗೆ ಉಪಬಂಧವನ್ನು ಯೋಜಿಸುವುದು ಅಥವಾ ಒದಗಿಸುವುದು ಅಥವಾ ಪಡೆದುಕೊಳ್ಳುವುದು,

(ಎಕ್ಸ್) ತನ್ನ ಸ್ವತ್ತುಗಳು ಮತ್ತು ಚಟುವಟಿಕೆಗಳ ಸಂಬಂಧದಲ್ಲಿ ಸರ್ಕಾರವು ಅಗತ್ಯಪಡಿಸಿದಂಥ ರೀತಿಯಲ್ಲಿ ಮತ್ತು ಅಂಥ ಅವಧಿಗಳಲ್ಲಿ ಎಲ್ಲಾ ಮಾಹಿತಿಯನ್ನು ಸರ್ಕಾರಕ್ಕೆ ಒದಗಿಸುವುದು;

(ವೈ) ಸರ್ಕಾರದ ಅನುಮೋದನೆಯೊಂದಿಗೆ ಭಾರತೀಯ ಬಂದರುಗಳು ಅಧಿನಿಯಮ, 1908ರನ್ವಯ ರಾಜ್ಯದಲ್ಲಿ ಹೊಸ ಸಣ್ಣ ಬಂದರುಗಳನ್ನು ಅಭಿವೃದ್ಧಿ ಪಡಿಸುವುದು;

(ಜೆಡ್) ಹಡಗು ಕಟ್ಟುವ, ಹಡಗು ಒಡೆಯುವ ಚಟುವಟಿಕೆಗಳಿಗೆ ಮೂಲ ಸೌಕರ್ಯಗಳನ್ನು ನಿರ್ಮಿಸುವುದು ಮತ್ತು ಸೌಲಭ್ಯಗಳನ್ನು ಒದಗಿಸುವುದು;

(ಜೆಡ್ಎ) ಕರ್ನಾಟಕ ಕರಾವಳಿಯಲ್ಲಿ ಪ್ರವಾಸೋದ್ಯಮ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳುವುದು;

(ಜೆಡ್‌ಬಿ) ಕರ್ನಾಟಕ ರಾಜ್ಯದಲ್ಲಿ ಫೆರ್ರಿ ಸೇವೆಗಳು ಮತ್ತು ಒಳನಾಡು ಜಲಸಾರಿಗೆ ಪದ್ಧತಿಯನ್ನು ನಿರ್ವಹಿಸುವುದು ಮತ್ತು ನಿಯಂತ್ರಿಸುವುದು;

(ಜೆಡ್‌ಸಿ) ಕರ್ನಾಟಕ ರಾಜ್ಯದಲ್ಲಿ ಕರಾವಳಿ ರಕ್ಷಣೆ ಕಾಮಗಾರಿಗಳನ್ನು ಕೈಗೊಳ್ಳುವುದು;

(ಜೆಡ್‌ಡಿ) ರಾಜ್ಯದಲ್ಲಿ ಮೀನುಗಾರಿಕೆಗಳ ಬಂದರುಗಳ ನಿರ್ಮಾಣ ಮತ್ತು ನಿರ್ವಹಣೆಗಾಗಿ ಹಾಗೂ ಮೀನುಗಾರಿಕೆ ಚಟುವಟಿಕೆಗಳಿಗೆ ಅಗತ್ಯವಾದ ಮೂಲ ಸೌಕರ್ಯಗಳನ್ನು ನಿರ್ಮಿಸುವುದು;

(ಜೆಡ್‌ಇ) ಕರ್ನಾಟಕ ಕರಾವಳಿಯಲ್ಲಿ ಸಮುದ್ರತೀರ ಪೋಷಣೆಯನ್ನು ಕೈಗೊಳ್ಳುವುದು;

(ಜೆಡ್‌ಎಫ್) ಮೇಲಿನದಕ್ಕೆ ಬಾಧಕವಾಗದಂತೆ, ರಾಜ್ಯದಲ್ಲಿ ಬಂದರುಗಳ ನಿರ್ವಹಣೆಗಾಗಿ ಮಂಡಳಿಯ ಅಭಿಪ್ರಾಯದಲ್ಲಿ ಅವಶ್ಯವಾದ ಅಂಥ ಇತರ ಸೇವೆಗಳು ಮತ್ತು ಇತರ ಸೌಲಭ್ಯಗಳನ್ನು ಒದಗಿಸುವುದಕ್ಕೆ ಉಪಬಂಧ ಕಲ್ಪಿಸುವುದು ಅಥವಾ ಖಚಿತ ಪಡಿಸಿಕೊಳ್ಳುವುದು,

- ಇವುಗಳನ್ನು ಒಳಗೊಳ್ಳುತ್ತದೆ.

(3) ಸರ್ಕಾರವು, ಸಿಬ್ಬಂದಿ ಖರ್ಚುಗಳು ಒಳಗೊಂಡಂತೆ ರಾಜ್ಯದಲ್ಲಿ ಫೆರ್ರಿ ಸೇವೆಗಳು, ಕರಾವಳಿ ರಕ್ಷಣೆ, ಮೀನುಗಾರಿಕೆ ಬಂದರು ಮತ್ತು ಯಾವುದೇ ಇತರ ಸೇವಾಭಿಮುಖ ಕಾಮಗಾರಿಗಳನ್ನು ಕೈಗೊಳ್ಳುವುದುಕ್ಕಾಗಿ ಪ್ರತ್ಯೇಕ ಹಣಕಾಸಿನ ಉಪಬಂಧಗಳನ್ನು ಕಲ್ಪಿಸುವುದು.

**26. ಕೆಲವು ಕಾಮಗಾರಿಗಳನ್ನು ಕೈಗೊಳ್ಳುವುದಕ್ಕೆ ಮಂಡಳಿಯ ಅಧಿಕಾರ.–** (1) ಮಂಡಳಿಯು, ಯಾವೊಬ್ಬ ವ್ಯಕ್ತಿಯ ಪರವಾಗಿ ಯಾವುದೇ ಕಾಮಗಾರಿಯನ್ನು ಅಥವಾ ಸೇವೆಯನ್ನು ಅಥವಾ ಯಾವುದೇ ಕಾಮಗಾರಿ ಅಥವಾ ಸೇವೆಗಳ ವರ್ಗವನ್ನು ಸಂಬಂಧಪಟ್ಟ ವ್ಯಕ್ತಿಯ ಅಥವಾ ಪ್ರಾಧಿಕಾರದ ಮತ್ತು ಮಂಡಳಿಯ ನಡುವೆ ಒಪ್ಪಿಕೊಳ್ಳಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಕಾರ್ಯಗತಗೊಳಿಸಬಹುದು.

(2) ಮಂಡಳಿಯು, ಸಾರ್ವಜನಿಕ ಹಿತದೃಷ್ಟಿಯಿಂದ ಹಾಗೆ ಮಾಡುವುದು ಅವಶ್ಯವೆಂದು ಅಥವಾ ಯುಕ್ತವೆಂದು ತಾನು ಭಾವಿಸಿದರೆ, ತನ್ನ ಯಾವುವೇ ನೌಕೆಗಳನ್ನು ಅಥವಾ ಸಲಕರಣೆಗಳನ್ನು ಅಥವಾ ತನ್ನ ಯಾವೊಬ್ಬ ನೌಕರನ ಸೇವೆಯನ್ನು ಯಾವುದೇ ವ್ಯಕ್ತಿಗೆ ಮೂರು ತಿಂಗಳ ಅವಧಿಗೆ ಮೀರದಂಥ ಅವಧಿಗೆ ಮಂಡಳಿ ಮತ್ತು ಸಂಬಂಧಿಸಿದ ವ್ಯಕ್ತಿಯ ನಡುವೆ ಮಾಡಿಕೊಂಡಂಥ ಒಪ್ಪಂದದ ನಿಬಂಧನೆ ಮತ್ತು ಷರತ್ತುಗಳಿಗೆ ಒಳಪಟ್ಟು ಎರವಲು ನೀಡಬಹುದು.

**27. ಸಮುದ್ರಯಾನದ ನೌಕೆಗಳು ಹಡಗುಕಟ್ಟೆ, ಸರಕುಕಟ್ಟೆ ಮುಂತಾದವುಗಳನ್ನು ಉಪಯೋಗಿಸಲು ಆದೇಶ ನೀಡಲು ಮಂಡಳಿಯ ಅಧಿಕಾರ.–** (1) ಯಾವುದೇ ಬಂದರಿನಲ್ಲಿ ಅಥವಾ ಬಂದರು ಜಲಮಾರ್ಗದಲ್ಲಿ ಈ ಅಧಿನಿಯಮದ ಅಡಿಯಲ್ಲಿ ಸ್ಥಾಪಿಸಲಾದ ಯಾವುದೇ ಹಡಗು ಕಟ್ಟೆ, ಬರ್ತ್, ಸರಕುಕಟ್ಟೆ, ಬಂದರುಕಟ್ಟೆ, ಸ್ಟೇಜ್, ಬಂದರು ಕಾಪು ಅಥವಾ ಹಡಗು ಇಳಿದಾಣ, ಲಂಗರು ಹಾಕುವ ಸ್ಥಳವನ್ನು ಸಾಕಷ್ಟು ಪ್ರಮಾಣದಲ್ಲಿ ಉಗ್ರಾಣಗಳು, ಷೆಡ್ಡುಗಳು ಮತ್ತು ಸಲಕರಣೆಗಳನ್ನು ಒಳಗೊಂಡ ಸಮುದ್ರಯಾನ ನೌಕೆಗಳಿಂದ ಅಥವಾ ನೌಕೆಗೆ, ನೌಕಾ ಸರಕುಗಳು ಅಥವಾ ಪ್ರಯಾಣಿಕರನ್ನು, ಬರಮಾಡಿಕೊಳ್ಳಲು, ಇಳಿಸಿಕೊಳ್ಳಲು ಅಥವಾ ಸಾಗಣೆ ಮಾಡಲು ಪೂರ್ಣಗೊಂಡಿದೆಯೆಂದಾಗ ಮಂಡಳಿಯು ಸೀಮಾಶುಲ್ಕ ಸಂಗ್ರಹಣಾಧಿಕಾರಿಗಳ ಅನುಮೋದನೆ ಪಡೆದು ನಂತರ ಸರ್ಕಾರಿ ರಾಜ್ಯ ಪತ್ರದ ಮೂರು ನಿರಂತರ ಸಂಚಿಕೆಗಳಲ್ಲಿ ಅಧಿಸೂಚನೆಯನ್ನು ಪ್ರಕಟಿಸಿ ಅಂಥ ಹಡಗುಕಟ್ಟೆ, ಬರ್ತ್, ಸರಕುಕಟ್ಟೆ, ಬಂದರುಕಟ್ಟೆ, ಸ್ಟೇಜ್, ಬಂದರು ಕಾಪು ಅಥವಾ ಹಡಗು ಇಳಿದಾಣ ಅಥವಾ ಲಂಗರು ಪ್ರದೇಶವು ಸಮುದ್ರ ಯಾನ ನೌಕೆಗಳಿಂದ ನೌಕಾ ಸರಕುಗಳನ್ನು ಅಥವಾ ಪ್ರಯಾಣಿಕರನ್ನು ಬರಮಾಡಿಕೊಳ್ಳಲು ಅಥವಾ ಏರಿಸಲು, ಹಡಗು ಸಾಗಣೆ ಮಾಡಲು ಅಥವಾ ಹಡಗುಗಳನ್ನು ನಿಲ್ಲಿಸಲು ತಯಾರಾಗಿವೆಯೆಂದು ಘೋಷಿಸಬಹುದು.

(2) ಅಂಥ ಅಧಿಸೂಚನೆಯನ್ನು ಮೂರನೇ ಬಾರಿಗೆ ಪ್ರಕಟಿಸಿದ ದಿನಾಂಕದಿಂದ ಅಂಥ ಹಡಗುಕಟ್ಟೆ, ಬರ್ತ್, ಸರಕುಕಟ್ಟೆ, ಬಂದರುಕಟ್ಟೆ, ಸ್ಟೇಜ್, ಬಂದರು ಕಾಪು, ಹಡಗು ಇಳಿದಾಣ ಅಥವಾ ಲಂಗರು ಪ್ರದೇಶದಲ್ಲಿ ಸ್ಥಳಾವಕಾಶವಿದ್ದಾಗ, ಬಂದರು ಅಥವಾ ಬಂದರು ಜಲಮಾರ್ಗದಲ್ಲಿ ಬಂದಿರುವ ಮತ್ತು ತನ್ನ ಪ್ರಯಾಣಿಕರನ್ನು ಅಥವಾ ಸರಕುಗಳನ್ನು ಇಳಿಸಲು ಪ್ರಾರಂಭಿಸಿರದ ಅಥವಾ ಸರಕುಗಳನ್ನು ಮತ್ತು ಪ್ರಯಾಣಿಕರನ್ನು ಮೇಲೇರಿಸಿಕೊಳ್ಳಬೇಕಾಗಿದ್ದು, ಹಾಗೆ ಮಾಡಲು ಪ್ರಾರಂಭಿಸಿರದ ಯಾವುದೇ ಸಮುದ್ರಯಾನ ನೌಕೆಯ ಅಂಥ ಹಡಗುಕಟ್ಟೆ, ಬರ್ತ್, ಸರಕುಕಟ್ಟೆ, ಬಂದರುಕಟ್ಟೆ, ಸ್ಟೇಜ್, ಬಂದರು ಕಾಪು, ಹಡಗು ಇಳಿದಾಣ ಅಥವಾ ಲಂಗರು ಪ್ರದೇಶದ ಮಗ್ಗುಲಿಗೆ ನೌಕೆಯನ್ನು, ಸರಕು ಮತ್ತು ಪ್ರಯಾಣಿಕರನ್ನು ಇಳಿಸಲು ಅಥವಾ ಇಳಿಸಿರುವ ಸರಕುಗಳನ್ನು ಸಾಗಣೆ ಮಾಡಲು ತಂದು ನಿಲ್ಲಿಸಬೇಕೆಂದು ಆದೇಶಿಸುವುದು ಕಾನೂನು ಬದ್ಧವಾಗಿರತಕ್ಕದ್ದು:

ಪರಂತು, ಅಂಥ ಆದೇಶವನ್ನು ಹೊರಡಿಸುವ ಮೊದಲು, ಮಂಡಳಿಯು, ಅಂಥ ನೌಕೆಗಳಿಗೆ ಮತ್ತು ನೌಕಾದಾರರಿಗೆ ಯಾವುದೇ ನಿರ್ದಿಷ್ಟ ಹಡಗುಕಟ್ಟೆ, ಬರ್ತ್, ಸರಕುಕಟ್ಟೆ, ಬಂದರುಕಟ್ಟೆ, ಸ್ಟೇಜ್, ಬಂದರು ಕಾಪು, ಹಡಗು ಇಳಿದಾಣ ಅಥವಾ ಲಂಗರು ಪ್ರದೇಶವು ಉಪಯೋಗಿಸುವ ಸಂಬಂಧದಲ್ಲಿ ಎಷ್ಟು ಅನುಕೂಲಕರವಾಗಿದೆಯೆಂಬುದನ್ನು ಗಣನೆಗೆ ತೆಗೆದುಕೊಳ್ಳತಕ್ಕದ್ದು.

**28. ಸಮುದ್ರಯಾನ ನೌಕೆಗಳು ಹಡಗುಕಟ್ಟೆ, ಬಂದರು ಕಟ್ಟೆ ಇತ್ಯಾದಿಗಳನ್ನು ಉಪಯೋಗಿಸುವುದಕ್ಕೆ ಸ್ಥಳಾವಕಾಶ.–** ಮೇಲೆ ಹೇಳಿದ ಅಂಥ ಯಾವುದೇ ಬಂದರು ಅಥವಾ ಬಂದರು ಜಲಮಾರ್ಗಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಹಡಗುಕಟ್ಟೆಗಳು, ಬರ್ತುಗಳು, ಸರಕು ಕಟ್ಟೆ, ಬಂದರು ಕಟ್ಟೆಗಳು, ಸ್ಟೇಜ್, ಬಂದರು ಕಾಪುಗಳು, ಹಡಗು ಇಳಿದಾಣ ಅಥವಾ ಲಂಗರು ಪ್ರದೇಶವನ್ನು ಒದಗಿಸಿದ್ದಾಗ, ಮಂಡಳಿಯು, ಸೀಮಾಶುಲ್ಕ ಕಲೆಕ್ಟರರ ಅನುಮೋದನೆಯನ್ನು ಪಡೆದ ತರುವಾಯ ಮತ್ತು ಸರ್ಕಾರಿ ರಾಜ್ಯಪತ್ರದ ಮೂರು ನಿರಂತರ ಸಂಚಿಕೆಗಳಲ್ಲಿ ಅಧಿಸೂಚನೆಯನ್ನು ಪ್ರಕಟಿಸಿ ಮಂಡಳಿಯ ಮಂಜೂರಾತಿಯೊಂದಿಗೆ ಹೊರತು ಮತ್ತು ಮಂಡಳಿಯು ನಿರ್ದಿಷ್ಟ ಪಡಿಸಬಹುದಾದಂಥ ಷರತ್ತುಗಳಿಗೆ ಅನುಸಾರವಾಗಿ ಹೊರತು ಅಂಥ ಹಡಗುಕಟ್ಟೆಗಳು, ಬರ್ತುಗಳು, ಸರಕುಕಟ್ಟೆ, ಬಂದರು ಕಟ್ಟೆಗಳು, ಸ್ಟೇಜು, ಬಂದರು ಕಾಪುಗಳು, ಹಡಗು ಇಳಿದಾಣ ಅಥವಾ ಲಂಗರು ಸ್ಥಳಗಳಲ್ಲಿ ಅಲ್ಲದೆ ಬೇರೆ ಯಾವುದೇ ಬಂದರು ಅಥವಾ ಬಂದರು ಜಲಮಾರ್ಗಗಳಲ್ಲಿ ಯಾವುದೇ ಸಮುದ್ರಯಾನ ನೌಕೆಯಿಂದ ಸರಕುಗಳನ್ನು ಅಥವಾ ಪ್ರಯಾಣಿಕರನ್ನು ಇಳಿಸದಂತೆ ಅಥವಾ ಏರಿಸಿಕೊಳ್ಳದಂತೆ ನಿರ್ದೇಶಿಸಬಹುದು.

**29. ಹಡಗುಕಟ್ಟೆಗಳು, ಬಂದರು ಕಟ್ಟೆಗಳು ಮುಂತಾದವುಗಳ ಮಗ್ಗುಲಿನಲ್ಲಿ ನೌಕೆಗಳು ಬಂದು ನಿಲ್ಲದಂತೆ ಅಥವಾ ಅಲ್ಲಿಂದ ಸ್ಥಳಾಂತರಿಸುವಂತೆ ಆದೇಶ ನೀಡುವ ಅಧಿಕಾರ.–** ಮಂಡಳಿಯಿಂದ ಇದಕ್ಕಾಗಿ ನೇಮಕಗೊಂಡ ಯಾವೊಬ್ಬ ಅಧಿಕಾರಿಯು, ತುರ್ತು ಪರಿಸ್ಥಿತಿಯ ಸಂದರ್ಭಗಳಲ್ಲಿ ಅಥವಾ ಸಾಕಷ್ಟು ಕಾರಣ ಎಂದು ತನಗೆ ಕಂಡುಬಂದ ಕಾರಣಗಳ ಮೇಲೆ ಲಿಖಿತ ನೋಟೀಸಿನ ಮೂಲಕ, ಯಾವುದೇ ಸಮುದ್ರಯಾನ ನೌಕೆಗಳ ಮಾಸ್ಟರು ಅಥವಾ ಮಾಲೀಕ ಅಥವಾ ಏಜೆಂಟನಿಗೆ ಅಂಥ ನೌಕೆಯನ್ನು ಮಂಡಳಿಗೆ ಸೇರಿದ ಅಥವಾ ಅದರ ನಿಯಂತ್ರಣದಲ್ಲಿರುವ ಯಾವುದೇ ಹಡಗುಕಟ್ಟೆ, ಬರ್ತು, ಸರಕುಕಟ್ಟೆ, ಬಂದರುಕಟ್ಟೆ, ಸ್ಟೇಜು, ಬಂದರುಕಾಪು, ಪಯರ್ ಅಥವಾ ಲಂಗರು ಸ್ಥಳದ ಮಗ್ಗುಲಿಗೆ ತಂದು ನಿಲ್ಲಿಸದಂತೆ ಅಥವಾ ಅಲ್ಲಿಂದ ಸ್ಥಳಾಂತರಿಸುವಂತೆ ಆದೇಶಿಸಬಹುದು ಮತ್ತು ಅಂಥ ನೋಟೀಸನ್ನು ಪಾಲಿಸದೇ ಇದ್ದರೆ, ಅಂಥ ನೌಕೆಗೆ ಸಂಬಂಧಿಸಿದಂತೆ ಅಂಥ ಹಡಗುಕಟ್ಟೆ, ಬರ್ತು, ಸರಕುಕಟ್ಟೆ, ಬಂದರುಕಟ್ಟೆ, ಸ್ಟೇಜ್, ಬಂದರುಕಾಪು, ಹಡಗು ಇಳಿದಾಣ ಅಥವಾ ಲಂಗರು ಸ್ಥಳದಲ್ಲಿ ಅಂಥ ನೌಕೆಯು ಇರುವವರೆಗೆ ಇಪ್ಪತ್ನಾಲ್ಕು ಗಂಟೆಗಳ ಪ್ರತಿಯೊಂದು ದಿನಕ್ಕೆ ಅಥವಾ ಅಂಥ ದಿನದ ಭಾಗಕ್ಕೆ ಹತ್ತುಸಾವಿರ ರೂಪಾಯಿಗಳಿಗೂ ಮೀರದಂತೆ, ತನಗೆ ಯುಕ್ತವೆಂದು ಭಾವಿಸುವಂಥ ಮೊತ್ತವನ್ನು ಮಂಡಳಿಯು ವಿಧಿಸಬಹುದು:

ಪರಂತು, ಸ್ಥಳಾಂತರಿಸಲು ಆದೇಶಿಸಲಾದ ನೌಕೆಯ ವಿಷಯದಲ್ಲಿ, ಮೇಲೆ ಹೇಳಿದಂಥ ನೋಟೀಸನ್ನು, ನೌಕೆಯ ಮಾಸ್ಟರು, ಅಥವಾ ಮಾಲೀಕ ಅಥವಾ ಏಜೆಂಟನ ಮೇಲೆ ಜಾರಿಯಾದ ಹನ್ನೆರಡು ಗಂಟೆಗಳು ಮುಕ್ತಾಯವಾಗುವವರೆಗೆ ಅಂಥ ಚಾರ್ಜನ್ನು ವಿಧಿಸಲು ಪ್ರಾರಂಭಿಸತಕ್ಕದ್ದಲ್ಲ.

**30. ಬಂದರು ಕಟ್ಟೆಗಳು, ಇತ್ಯಾದಿಗಳನ್ನು ಉಪಯೋಗಿಸುವ ಬಾಧ್ಯತೆಯಿಂದ ವಿನಾಯಿತಿ ಕೊಡಲು ಸರ್ಕಾರದ ಅಧಿಕಾರ.–** 27 ಅಥವಾ 28ನೇ ಪ್ರಕರಣಗಳಲ್ಲಿ ಏನೇ ಇದ್ದರೂ, ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯಲ್ಲಿ ಹಾಗೆ ಮಾಡುವುದು ಅವಶ್ಯಕವೆಂದು ಅಭಿಪ್ರಾಯಪಟ್ಟಲ್ಲಿ ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ಕಾಲಕಾಲಕ್ಕೆ ಕೆಲವು ವಿಶಿಷ್ಟ ನೌಕೆಗಳಿಗೆ ಅಥವಾ ನೌಕೆಗಳ ವರ್ಗಗಳಿಗೆ ಬಂದರಿನ ಅಥವಾ ಬಂದರು ಜಲಮಾರ್ಗಗಳಲ್ಲಿನ, ಸರ್ಕಾರವು ಸೂಕ್ತವೆಂದು ಭಾವಿಸಿದಂಥ ಸ್ಥಳಗಳಲ್ಲಿ, ಅಂಥ ರೀತಿಯಲ್ಲಿ ಅಂಥ ಅವಧಿಯಲ್ಲಿ ಮತ್ತು ಮಂಡಳಿಗೆ ಅಂಥ ಹಣ ಸಂದಾಯ ಮಾಡುವುದಕ್ಕೆ ಒಳಪಟ್ಟು ಮತ್ತು ಅಂಥ ಷರತ್ತುಗಳ ಮೇಲೆ ಸರಕುಗಳನ್ನು ಅಥವಾ ಕೆಲವು ವಿಶಿಷ್ಟ ಸರಕುಗಳನ್ನು ಅಥವಾ ಸರಕುಗಳ ವರ್ಗಗಳನ್ನು ಇಳಿಸಲು ಅಥವಾ ತುಂಬಲು ಅನುಮತಿಸಬಹುದು.

**31. ಸಮುದ್ರಯಾನ ನೌಕೆಗಳನ್ನು ಹೊರತುಪಡಿಸಿ ಇತರ ನೌಕೆಗಳ ಹಡಗುಕಟ್ಟೆ, ಬಂದರುಕಟ್ಟೆಗಳನ್ನು ಉಪಯೋಗಿಸುವಂತೆ ಯಾವ ಸಂದರ್ಭದಲ್ಲಿ ಒತ್ತಾಯಿಸಲಾಗುವುದೆಂಬುದನ್ನು ಮಂಡಳಿಯು ಘೋಷಿಸುವುದು.–** (1) ಯಾವುದೇ ಹಡಗುಕಟ್ಟೆ, ಬರ್ತ್, ಸರಕುಕಟ್ಟೆ, ಬಂದರುಕಟ್ಟೆ, ಸ್ಟೇಜ್, ಬಂದರು ಕಾಪು, ಹಡಗು ಇಳಿದಾಣ ಅಥವಾ ಲಂಗರು ಸ್ಥಳವನ್ನು, ಸಮುದ್ರಯಾನ ನೌಕೆಗಳಲ್ಲದ ಬೇರೆ ನೌಕೆಗಳಿಂದ ಸರಕುಗಳನ್ನು ಅಥವಾ ಪ್ರಯಾಣಿಕರನ್ನು ಬರಮಾಡಿಕೊಳ್ಳುವುದಕ್ಕೆ, ಇಳಿಸುವುದಕ್ಕೆ ಅಥವಾ ಏರಿಸುವುದಕ್ಕೆ ಯುಕ್ತವಾದ ಸಾಧನ ಸಲಕರಣೆಗಳೊಂದಿಗೆ ಮಾಡಿ ಮುಕ್ತಾಯಗೊಳಿಸಿದ ಮೇಲೆ, ಮಂಡಳಿಯು, ಸೀಮಾಶುಲ್ಕ ಕಲೆಕ್ಟರರ ಅನುಮೋದನೆ ಪಡೆದ ತರುವಾಯ, ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ಆದೇಶದ ಮೂಲಕ,–

(i) ಅಂಥ ಹಡಗುಕಟ್ಟೆ, ಬರ್ತ್, ಸರಕುಕಟ್ಟೆ, ಬಂದರುಕಟ್ಟೆ, ಸ್ಟೇಜು, ಬಂದರುಕಾಪು, ಹಡಗು ಇಳಿದಾಣ ಅಥವಾ ಲಂಗರು ಸ್ಥಳವು, ಸಮುದ್ರಯಾನ ನೌಕೆಗಳಲ್ಲದ ಬೇರೆ ನೌಕೆಗಳಿಂದ ಅಥವಾ ಅವುಗಳ ಮೇಲಕ್ಕೆ ಸರಕುಗಳನ್ನು ಅಥವಾ ಪ್ರಯಾಣಿಕರನ್ನು ಬರಮಾಡಿಕೊಳ್ಳುವುದಕ್ಕೆ, ಇಳಿಸುವುದಕ್ಕೆ ಅಥವಾ ಏರಿಸುವುದಕ್ಕೆ ಸಿದ್ಧವಾಗಿದೆ ಎಂದು ಘೋಷಿಸಬಹುದು; ಮತ್ತು

(ii) ಆ ಆದೇಶದಲ್ಲಿ ನಿರ್ದಿಷ್ಟಪಡಿಸಿದಂಥ ಪರಿಮಿತಿಯೊಳಗೆ, ಮಂಡಳಿಯ ಸ್ಪಷ್ಟ ಮಂಜೂರಾತಿ ಇಲ್ಲದೆ ಅಂಥ ಹಡಗುಕಟ್ಟೆ, ಬರ್ತ್, ಸರಕುಕಟ್ಟೆ, ಬಂದರುಕಟ್ಟೆ, ಸ್ಟೇಜು, ಬಂದರುಕಾಪು, ಹಡಗು ಇಳಿದಾಣ ಅಥವಾ ಲಂಗರು ಸ್ಥಳದಲ್ಲಿ ಹೊರತಾಗಿ ಬೇರೆಡೆ ಅಂಥ ಆದೇಶದಲ್ಲಿ ನಿರ್ದಿಷ್ಟಪಡಿಸಿದ ಸಮುದ್ರಯಾನದ ಯಾವುದೇ ವರ್ಗದ ನೌಕೆಯಲ್ಲದ ಯಾವುದೇ ನೌಕೆಯಿಂದ ಅಥವಾ ಅದರೊಳಕ್ಕೆ ಯಾವುದೇ ಸರಕುಗಳನ್ನು ಅಥವಾ ಪ್ರಯಾಣಿಕರನ್ನು ಇಳಿಸುವುದು ಅಥವಾ ಏರಿಸುವುದು ಕಾನೂನು ಸಮ್ಮತವಲ್ಲವೆಂದು ನಿರ್ದೇಶಿಸಬಹುದು.

(2) (1)ನೇ ಉಪ–ಪ್ರಕರಣದಲ್ಲಿ ನಮೂದಿಸಿದ ಆದೇಶದ ಪ್ರಕಟಣೆಯ ದಿನಾಂಕದಿಂದ ಮಂಡಳಿಯ ಒಪ್ಪಿಗೆ ಇಲ್ಲದೆ ಯಾವುದೇ ವರ್ಗದ ನೌಕೆಗಳು,–

(i) ಅಂಥ ಹಡಗುಕಟ್ಟೆ, ಬರ್ತ್, ಸರಕುಕಟ್ಟೆ, ಬಂದರುಕಟ್ಟೆ, ಸ್ಟೇಜು, ಬಂದರುಕಾಪು, ಹಡಗು ಇಳಿದಾಣ ಅಥವಾ ಲಂಗರುಸ್ಥಳದ ಹೊರತು, ಹಾಗೆ ನಿರ್ದಿಷ್ಟ ಪಡಿಸಿದ ಅಂಥ ಪರಿಮಿತಿಯಲ್ಲಿನ ಯಾವುದೇ ಸ್ಥಳದಲ್ಲಿ, ಯಾವುದೇ ಸರಕುಗಳನ್ನು ಅಥವಾ ಪ್ರಯಾಣಿಕರನ್ನು ಇಳಿಸುವುದು ಅಥವಾ ಏರಿಸುವುದು; ಮತ್ತು

(ii) ಅಂಥ ಪರಿಮಿತಿಯೊಳಗಿರುವಾಗ ಸಾಮಾನ್ಯ ನೀರಿನ ಇಳಿತದ ಮಟ್ಟದ ಐವತ್ತು ಮೀಟರುಗಳಲ್ಲಿ ಲಂಗರು ಹಾಕುವುದು, ಕಟ್ಟಿಹಾಕುವುದು ಅಥವಾ ನಿಲ್ಲಿಸುವುದು,

– ಕಾನೂನು ಸಮ್ಮತವಾಗಿರತಕ್ಕದ್ದಲ್ಲ.

(3) ಅಂಥ ಆದೇಶದ ಪ್ರಕಟಣೆಯ ತರುವಾಯ, ಅಂಥ ಯಾವುದೇ ನೌಕೆಯು, ಹಾಗೆ ನಿರ್ದಿಷ್ಟಪಡಿಸಿದ ಪರಿಮಿತಿಯಲ್ಲಿರುವಾಗ, ಹಾಗೆ ಲಂಗರು ಹಾಕಿದರೆ, ಕಟ್ಟಿಹಾಕಿದರೆ ಅಥವಾ ನಿಲ್ಲಿಸಿದರೆ ಆ ನೌಕೆಯ ಮಾಸ್ಟರ್‌ನ, ಮಾಲೀಕನ ಅಥವಾ ಏಜೆಂಟನ ವೆಚ್ಚದಲ್ಲಿ ಅದನ್ನು ಸದರಿ ಪರಿಮಿತಿಯಿಂದ ಹೊರಹಾಕುವುದು ಮಂಡಳಿಗೆ ಕಾನೂನು ಸಮ್ಮತವಾಗಿರತಕ್ಕದ್ದು.

**32. ಮಂಡಳಿ ಅಥವಾ ಇತರ ವ್ಯಕ್ತಿಯು ಸೇವೆಯನ್ನು ನೆರವೇರಿಸುವುದು.–** (1) ಮಂಡಳಿಗೆ ಈ ಮುಂದಿನ ಸೇವೆಗಳನ್ನು ಕೈಗೊಳ್ಳಲು ಅಧಿಕಾರವಿರುತ್ತದೆ, ಎಂದರೆ:–

(ಎ) ಮಂಡಳಿಗೆ ಸೇರಿದ ಅಥವಾ ಅದರ ಸ್ವಾಧೀನದಲ್ಲಿರುವ ಬಂದರಿನಲ್ಲಿನ ಮತ್ತು ಸರಕು ಕಟ್ಟೆಗಳು, ಹಡಗು ಇಳಿದಾಣ, ಬಂದರು ಕಟ್ಟೆ ಅಥವಾ ಹಡಗು ಕಟ್ಟೆಗಳಲ್ಲಿ ನೌಕೆಗಳ ನಡುವೆ ಪ್ರಯಾಣಿಕರನ್ನು ಮತ್ತು ಸರಕುಗಳನ್ನು ಎತ್ತುವುದು, ಇಳಿಸುವುದು, ಏರಿಸುವುದು ಅಥವಾ ಸ್ಥಳಾಂತರಿಸುವುದು ;

(ಬಿ) ಮಂಡಳಿಯ ಆವರಣದೊಳಗೆ ತರಲಾದ ಸರಕುಗಳನ್ನು ಪಡೆಯುವುದು, ಹೊರಹಾಕುವುದು ಸ್ಥಳಾಂತರಿಸುವುದು, ಸಾಗಿಸುವುದು, ದಾಸ್ತಾನುಮಾಡುವುದು ಅಥವಾ ವಿಲೆ ಮಾಡುವುದು ;

(ಸಿ) ಮಂಡಳಿಯು, ತಾನು ವಿಧಿಸಲು ಯುಕ್ತವೆಂದು ಭಾವಿಸಬಹುದಾದಂಥ ನಿರ್ಬಂಧಗಳಿಗೆ ಮತ್ತು ಷರತ್ತುಗಳಿಗೆ ಒಳಪಟ್ಟು ಅಂಥ ಸಾಧನದ ಮೂಲಕ ಬಂದರುಗಳ ಅಥವಾ ಬಂದರು ಸಮೀಪದ ಸಂಪರ್ಕಗಳ ಪರಿಮಿತಿಯಲ್ಲಿ ಪ್ರಯಾಣಿಕರನ್ನು ಸಾಗಿಸುವುದು; ಮತ್ತು

(ಡಿ) ನೌಕೆಗಳನ್ನು ಚಾಲನೆಮಾಡುವುದು, ಸಾಗಿಸುವುದು, ಲಂಗರುಹಾಕುವುದು, ರೂಮರಿಂಗ್ (rumouring), ಹುಕ್ಕಿಂಗ್ ಅಥವಾ ಅಳತೆಮಾಡುವುದು ಅಥವಾ ನೌಕೆಗಳಿಗೆ ಸಂಬಂಧಿಸಿದ ಇತರ ಯಾವುದೇ ಸೇವೆಗಳನ್ನು ಮಾಡುವುದು.

(2) ಮಾಲೀಕನು ಹಾಗೆ ವಿನಂತಿಸಿಕೊಂಡರೆ, ಸೇವೆಯನ್ನು ಅಥವಾ ಸೇವೆಗಳನ್ನು ನೆರವೇರಿಸುವ ಉದ್ದೇಶಕ್ಕಾಗಿ ಮಂಡಳಿಯು ಸರಕುಗಳನ್ನು ವಶಕ್ಕೆ ತೆಗೆದುಕೊಳ್ಳಬಹುದು ಮತ್ತು ಮಂಡಳಿಯು, ವಿನಿಯಮಗಳ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ನಮೂನೆಯಲ್ಲಿ ರಸೀದಿಯನ್ನು ಕೊಡತಕ್ಕದ್ದು.

(3) ಈ ಪ್ರಕರಣದಲ್ಲಿ ಏನೇ ಇದ್ದರೂ, (1)ನೇ ಉಪಪ್ರಕರಣದಲ್ಲಿ ನಮೂದಿಸಿದ ಯಾವುದೇ ಸೇವೆಗಳನ್ನು ಒಪ್ಪಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ನೆರವೇರಿಸಲು ಯಾವೊಬ್ಬ ವ್ಯಕ್ತಿಯನ್ನು ಮಂಡಳಿಯು ಅಧಿಕೃತಗೊಳಿಸಬಹುದು.

(4) (3)ನೇ ಉಪಪ್ರಕರಣದ ಮೇರೆಗೆ ಅಧಿಕೃತಗೊಂಡ ಯಾವೊಬ್ಬ ವ್ಯಕ್ತಿಯೂ ಅಂಥ ಸೇವೆಗಳಿಗೆ 37, 38 ಅಥವಾ 40ನೇ ಪ್ರಕರಣಗಳ ಅಡಿಯಲ್ಲಿ ರಚಿಸಲಾದ ದರಶ್ರೇಣಿಗಳಿಗೆ ಅನುಸಾರವಾಗಿ ವಿಧಿಸಬಹುದಾದ ಮೊಬಲಗಿಗಿಂತ ಅಧಿಕವಾದ ಮೊಬಲಗನ್ನು ವಿಧಿಸತಕ್ಕದ್ದಲ್ಲ ಅಥವಾ ವಸೂಲಿ ಮಾಡತಕ್ಕದ್ದಲ್ಲ.

(5) ಅಂಥ ಯಾವೊಬ್ಬ ವ್ಯಕ್ತಿಯು, ಮಾಲೀಕನು ಹಾಗೆ ಅಗತ್ಯಪಡಿಸಿದರೆ, ಸರಕುಗಳಿಗೆ ಸಂಬಂಧಿಸಿದಂತೆ ಯಾವುದೇ ಸೇವೆಯನ್ನು ನೆರವೇರಿಸತಕ್ಕದ್ದು ಮತ್ತು ಆ ಉದ್ದೇಶಕ್ಕಾಗಿ ಸರಕುಗಳನ್ನು ವಶಕ್ಕೆ ತೆಗೆದುಕೊಳ್ಳತಕ್ಕದ್ದು ಮತ್ತು ಮಂಡಳಿಯು, ನಿರ್ದಿಷ್ಟಪಡಿಸಬಹುದಾದಂಥ ನಮೂನೆಯಲ್ಲಿ ರಸೀದಿಯನ್ನು ಕೊಡತಕ್ಕದ್ದು.

(6) ತಾನು ವಶಕ್ಕೆ ತೆಗೆದುಕೊಂಡ ಸರಕುಗಳಿಗಾದ ನಷ್ಟ, ನಾಶ ಅಥವಾ ಇಳಿಗತಿಗೆ ಅಂಥ ಯಾವೊಬ್ಬ ವ್ಯಕ್ತಿಯ ಹೊಣೆಗಾರಿಕೆಯು, ಈ ಅಧಿನಿಯಮದ ಇತರ ಉಪಬಂಧಗಳಿಗೆ ಒಳಪಟ್ಟು ಭಾರತ ಕರಾರು ಅಧಿನಿಯಮ, 1872ರ 151, 152 ಮತ್ತು 161ನೇ ಪ್ರಕರಣದ ಅಡಿಯಲ್ಲಿನ ಸರಕುಗಳ ರಕ್ಷಕನ (ಬೇಯ್ಲೀ) ಹೊಣೆಗಾರಿಕೆಯಂತೆ ಇರತಕ್ಕದ್ದು.

(7) ಈ ಪ್ರಕರಣದ ಅಡಿಯಲ್ಲಿ, ಯಾವುದೇ ಸರಕುಗಳನ್ನು ವಶಕ್ಕೆ ತೆಗೆದುಕೊಂಡು ಅವುಗಳಿಗೆ ರಸೀದಿಯನ್ನು ಕೊಟ್ಟ ತರುವಾಯ, ಅವುಗಳಿಗೆ ಸಂಭವಿಸಬಹುದಾದ ಯಾವುದೇ ನಷ್ಟ ಅಥವಾ ಹಾನಿಗಾಗಿ ಯಾವ ಹೊಣೆಗಾರಿಕೆಯೂ, ಯಾರಿಗೆ ರಸೀದಿಯನ್ನು ಕೊಡಲಾಗಿದೆಯೋ ಆ ವ್ಯಕ್ತಿಗೆ ಅಥವಾ ಯಾವ ನೌಕೆಯಿಂದ ಸರಕುಗಳನ್ನು ಇಳಿಸಲಾಗಿದೆಯೋ ಅಥವಾ ಸ್ಥಳಾಂತರಿಸಲಾಗಿದೆಯೋ ಆ ನೌಕೆಯ ಮಾಸ್ಟರನಿಗೆ ಅಥವಾ ಮಾಲೀಕನಿಗೆ ಇರತಕ್ಕದ್ದಲ್ಲ.

**33. ಸರಕುಗಳ ನಷ್ಟ ಇತ್ಯಾದಿಗಳಿಗಾಗಿ ಮಂಡಳಿಯ ಹೊಣೆಗಾರಿಕೆ.–** (1) ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು, ತನ್ನ ವಶಕ್ಕೆ ತೆಗೆದುಕೊಂಡ ಸರಕುಗಳ ನಷ್ಟ, ನಾಶ ಅಥವಾ ಇಳಿಗತಿಗಾಗಿ ಮಂಡಳಿಯ ಹೊಣೆಗಾರಿಕೆಯು,–

(i) ರೈಲ್ವೆ ಮೂಲಕ ಸಾಗಣೆಗಾಗಿ ತೆಗೆದುಕೊಂಡ ಸರಕುಗಳಿಗೆ ಸಂಬಂಧಿಸಿದಂತೆ, ಭಾರತ ರೈಲ್ವೆ ಅಧಿನಿಯಮ, 1890ರ ಉಪಬಂಧಗಳನ್ನು ಅನ್ವಯಿಸತಕ್ಕದ್ದು, ಮತ್ತು

(ii) ಇತರ ಸಂದರ್ಭಗಳಲ್ಲಿ, ಭಾರತ ಕರಾರು ಅಧಿನಿಯಮ, 1872ರ 152ನೇ ಪ್ರಕರಣದಲ್ಲಿನ 'ಯಾವುದೇ ವಿಶೇಷ ಕರಾರಿನ ಅಭಾವದಲ್ಲಿ' ಎಂಬ ಪದಗಳನ್ನು ಬಿಟ್ಟು, ಆ ಅಧಿನಿಯಮದ 151, 152 ಮತ್ತು 161ನೇ ಪ್ರಕರಣದ ಅಡಿಯಲ್ಲಿನ ಸರಕುಗಳ ರಕ್ಷಕನದೆಂಬಂತೆ (ಬೇಯ್ಲರ್) ಅನ್ವಯಿಸತಕ್ಕದ್ದು:

ಪರಂತು, ಈ ಪ್ರಕರಣದ ಅಡಿಯಲ್ಲಿ ಮಂಡಳಿಗೆ ಯಾವುದೇ ಹೊಣೆಗಾರಿಕೆಯು,–

(ಎ) 32ನೇ ಪ್ರಕರಣದ (2)ನೇ ಉಪ–ಪ್ರಕರಣದಲ್ಲಿ ನಮೂದಿಸಿದ ರಸೀದಿಯನ್ನು ಮಂಡಳಿಯು ಕೊಡುವವರೆಗೆ ; ಮತ್ತು

(ಬಿ) ಅಂಥ ಸರಕುಗಳನ್ನು ಮಂಡಳಿಯು ವಶಕ್ಕೆ ತೆಗೆದುಕೊಂಡ ದಿನಾಂಕದಿಂದ, ವಿನಿಯಮಗಳ ಮೂಲಕ ಉಪಬಂಧಿಸಬಹುದಾದಂಥ ಅವಧಿಯು ಮುಕ್ತಾಯವಾದ ತರುವಾಯ,

– ಅನ್ವಯವಾಗತಕ್ಕದ್ದಲ್ಲ.

(2) ತಾನು ವಶಕ್ಕೆ ತೆಗೆದುಕೊಂಡ ಸರಕುಗಳ ನಷ್ಟ, ನಾಶ ಅಥವಾ ಇಳಿಗತಿ ಅಥವಾ ಹಾನಿಗಳಿಗಾಗಿ, ಅಂಥ ನಷ್ಟ ಅಥವಾ ಹಾನಿಯ ಬಗ್ಗೆ 32ನೇ ಪ್ರಕರಣದ (2)ನೇ ಉಪಪ್ರಕರಣದ ಅಡಿಯಲ್ಲಿ ಮಂಡಳಿಯು ಅಂಥ ಸರಕುಗಳನ್ನು ವಶಕ್ಕೆ ತೆಗೆದುಕೊಂಡ ದಿನಾಂಕದಿಂದ, ವಿನಿಯಮದ ಮೂಲಕ ನಿಯಮಿಸಬಹುದಾದಂಥ ಅವಧಿಯೊಳಗೆ ನೋಟೀಸನ್ನು ಕೊಟ್ಟ ಹೊರತು, ಮಂಡಳಿಯು ಯಾವುದೇ ರೀತಿಯಲ್ಲಿ ಹೊಣೆಯಾಗತಕ್ಕದ್ದಲ್ಲ.

**34. ಸೀಮಾಶುಲ್ಕ ಅಧಿನಿಯಮ, 1962ರ ಅಡಿಯಲ್ಲಿ ನೇಮಕಗೊಂಡ ಬಂದರುಕಟ್ಟೆ, ಇತ್ಯಾದಿಗಳಲ್ಲಿ ಸೀಮಾಶುಲ್ಕ ಅಧಿಕಾರಿಗಳಿಗೆ ಸ್ಥಳಾವಕಾಶ ಒದಗಿಸುವುದು.–** (1) ಸೀಮಾಶುಲ್ಕ ಕಲೆಕ್ಟರು, ಯಾವುದೇ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಸೀಮಾಶುಲ್ಕ ವಿಧಿಸುವುದಕ್ಕಾಗಿ ಯಾವುದೇ ಹಡಗುಕಟ್ಟೆ, ಬರ್ತ್, ಬಂದರು ಕಟ್ಟೆ, ಸರಕುಕಟ್ಟೆ, ಸ್ಟೇಜು, ಬಂದರು ಕಾಪು, ಹಡಗು ಇಳಿದಾಣ ಅಥವಾ ಲಂಗರು ಸ್ಥಳ ಅಥವಾ ಸಮುದ್ರಯಾನ ನೌಕೆಗಳ ಉಪಯೋಗಕ್ಕಾಗಿ ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಯಾವುದೇ ಬಂದರಿನಲ್ಲಿ ಒದಗಿಸಲಾದ ಉಗ್ರಾಣ ಅಥವಾ ಷೆಡ್ ಅಥವಾ ಯಾವುದೇ ಉಗ್ರಾಣದ ಅಥವಾ ಷೆಡ್ಡಿನ ಒಂದು ಭಾಗವನ್ನು, ಸರಕುಗಳನ್ನು ಇಳಿಸುವುದಕ್ಕಾಗಿ ಅಥವಾ ಶುಲ್ಕವಿಧಿಸಬಹುದಾದ ಸರಕುಗಳನ್ನು, ಅವುಗಳ ಮೊದಲ ಆಮದಿನ ಮೇಲೆ ಶುಲ್ಕ ಸಂದಾಯ ಮಾಡದೆ ದಾಸ್ತಾನು ಮಾಡುವುದಕ್ಕಾಗಿ, ಉಗ್ರಾಣವೆಂದು ಮೊದಲು ನಮೂದಿಸಿದ ಅಧಿನಿಯಮದ ಅರ್ಥವ್ಯಾಪ್ತಿಯಲ್ಲಿ ಗೊತ್ತುಪಡಿಸಿದ್ದರೆ, ಮಂಡಳಿಯು, ಅಂಥ ಹಡಗುಕಟ್ಟೆ, ಬರ್ತ್, ಸರಕುಕಟ್ಟೆ, ಬಂದರು ಕಟ್ಟೆ, ಸ್ಥಿರ ಇಳಿದಾಣ, ಸ್ಟೇಜು, ಬಂದರುಕಾಪು, ಹಡಗು ಇಳಿದಾಣ ಅಥವಾ ಲಂಗರು ಸ್ಥಳ ಅಥವಾ ಅದರ ಸಮೀಪದ ಸ್ಥಳವನ್ನು ಅಥವಾ ಅಂಥ ಉಗ್ರಾಣ ಅಥವಾ ಷೆಡ್ ಅಥವಾ ಅವುಗಳ ಒಂದು ಭಾಗವನ್ನು ಸೀಮಾಶುಲ್ಕ ಅಧಿಕಾರಿಗಳಿಗೆ ಅಗತ್ಯವಾಗಬಹುದಾದ ಉಪಯೋಗಕ್ಕಾಗಿ ಕಾಯ್ದಿರಿಸತಕ್ಕದ್ದು ಮತ್ತು ನಿರ್ವಹಿಸತಕ್ಕದ್ದು.

(2) ಯಾವುದೇ ಬಂದರಿನಲ್ಲಿ ಯಾವುದೇ ಹಡಗುಕಟ್ಟೆ, ಬರ್ತ್, ಸರಕುಕಟ್ಟೆ, ಬಂದರುಕಟ್ಟೆ, ಸ್ಟೇಜು, ಬಂದರುಕಾಪು, ಹಡಗು ಇಳಿದಾಣ ಅಥವಾ ಲಂಗರು ಸ್ಥಳ, ಉಗ್ರಾಣ ಅಥವಾ ಷೆಡ್ ಅಥವಾ ಅವುಗಳ ಒಂದು ಭಾಗವನ್ನು (1)ನೇ ಉಪಪ್ರಕರಣದ ಉಪಬಂಧಗಳ ಮೇರೆಗೆ ಬಂದರಿನ ಸೀಮಾಶುಲ್ಕ ಅಧಿಕಾರಿಗಳ ಉಪಯೋಗಕ್ಕಾಗಿ ಕಾಯ್ದಿರಿಸಿದ್ದರೂ ಅವುಗಳಿಗೆ ಸಂಬಂಧಿಸಿ ಅಥವಾ ಅವುಗಳಲ್ಲಿ ಸರಕುಗಳ ದಾಸ್ತಾನು ಇರಿಸಿಕೊಳ್ಳುವುದಕ್ಕಾಗಿ ಈ ಅಧಿನಿಯಮದ ಅಡಿಯಲ್ಲಿ ಸಂದಾಯವಾಗಬೇಕಾದ ಎಲ್ಲಾ ದರಗಳು ಮತ್ತು ಇತರ ವೆಚ್ಚಗಳು ಮಂಡಳಿಗೆ ಅಥವಾ ಅವುಗಳನ್ನು ಸ್ವೀಕರಿಸಲು ಮಂಡಳಿಯು ನೇಮಕಮಾಡಬಹುದಾದಂಥ ವ್ಯಕ್ತಿಗೆ ಅಥವಾ ವ್ಯಕ್ತಿಗಳಿಗೆ ಸಂದಾಯವಾಗತಕ್ಕದ್ದು.

**35. ಷರತ್ತುಗಳಿಗೆ ಒಳಪಟ್ಟು ಬಂದರಿನ ಪರಿಮಿತಿಯಲ್ಲಿ ಖಾಸಗಿ ಬಂದರುಕಟ್ಟೆ ಇತ್ಯಾದಿಗಳ ನಿರ್ಮಾಣಕ್ಕೆ ಅನುಮತಿಸುವ ಅಧಿಕಾರ.–** (1) ಬಂದರು ಅಥವಾ ಬಂದರು ಜಲಮಾರ್ಗಗಳ ಪರಿಮಿತಿಯಲ್ಲಿ ಯಾವ ವ್ಯಕ್ತಿಯೂ, ಮಂಡಳಿಯ ಲಿಖಿತ ಪೂರ್ವಾನುಮತಿಯಿಂದ ಮತ್ತು ಮಂಡಳಿಯು ನಿರ್ದಿಷ್ಟಪಡಿಸಬಹುದಾದ ಯಾವುದೇ ಷರತ್ತಿಗೆ ಒಳಪಟ್ಟ ಹೊರತು ಯಾವುದೇ ಹಡಗುಕಟ್ಟೆ, ಬರ್ತ್, ಸರಕುಕಟ್ಟೆ, ಬಂದರು ಕಟ್ಟೆ, ಸ್ಟೇಜು, ಬಂದರುಕಾಪು, ಹಡಗು ಇಳಿದಾಣ ಅಥವಾ ಲಂಗರು ಸ್ಥಳ, ನಿರ್ಮಾಣ ಅಥವಾ ಲಂಗರು ಸ್ಥಳವನ್ನು ರಚಿಸಕೂಡದು, ನಿರ್ಮಿಸಕೂಡದು ಅಥವಾ ಜೋಡಿಸಕೂಡದು ಹಾಗೂ ಸದರಿ ಪರಿಮಿತಿಯೊಳಗೆ ಮುಂಗರೆಯನ್ನು ಕೃಷಿ ಯೋಗ್ಯವಾಗಿ ಮಾಡಕೂಡದು.

(2) ಯಾವೊಬ್ಬ ವ್ಯಕ್ತಿಯು, (1)ನೇ ಉಪಪ್ರಕರಣವನ್ನು ಉಲ್ಲಂಘಿಸಿ ಯಾವುದೇ ಹಡಗುಕಟ್ಟೆ, ಬರ್ತ್, ಬಂದರು ಕಟ್ಟೆ, ಸ್ಟೇಜು, ಬಂದರುಕಾಪು, ಹಡಗು ಇಳಿದಾಣ ಅಥವಾ ಲಂಗರು ಸ್ಥಳವನ್ನು ರಚಿಸಿದರೆ, ನಿರ್ಮಾಣ ಮಾಡಿದರೆ ಅಥವಾ ಜೋಡಿಸಿದರೆ ಅಥವಾ ಮುಂಗರೆಯನ್ನು ಕೃಷಿ ಯೋಗ್ಯ ಭೂಮಿಯಾಗಿ ಮಾಡಿದರೆ, ಮಂಡಳಿಯು ನೋಟೀಸು ಹೊರಡಿಸುವ ಮೂಲಕ, ನೋಟೀಸಿನಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಸಮಯದಲ್ಲಿ ಅದನ್ನು ತೆಗೆದುಹಾಕುವಂತೆ ಅಂಥ ವ್ಯಕ್ತಿಗೆ ಅಗತ್ಯಪಡಿಸಬಹುದು ಮತ್ತು ಆ ವ್ಯಕ್ತಿಯು ಅದನ್ನು ತೆಗೆದುಹಾಕಲು ತಪ್ಪಿದಲ್ಲಿ ಮಂಡಳಿಯು ಅಂಥ ವ್ಯಕ್ತಿಯ ವೆಚ್ಚದಲ್ಲಿ ಅದನ್ನು ತೆಗೆದುಹಾಕಿಸಬಹುದು.

**36. ಯಾವುದೇ ಖಾಸಗಿ ಬಂದರುಕಟ್ಟೆ ಮುಂತಾದವುಗಳ ಬಳಕೆಯು ಕಾನೂನು ಬಾಹಿರವೆಂದು ಪರಿಗಣಿಸಿದ ಕೆಲವು ಪ್ರಕರಣಗಳಲ್ಲಿ ಸಂದಾಯಮಾಡತಕ್ಕ ನಷ್ಟಪರಿಹಾರ.–** (1) 28ನೇ ಪ್ರಕರಣದ ಅಥವಾ 31ನೇ ಪ್ರಕರಣದ ಅಡಿಯಲ್ಲಿ ಪ್ರಕಟಿಸಲಾದ ಆದೇಶದ ಪರಿಣಾಮವಾಗಿ ಯಾವೊಬ್ಬ ವ್ಯಕ್ತಿಯು ರಚಿಸಿದ, ಸ್ಥಾಪಿಸಿದ ಅಥವಾ ನಿರ್ಮಿಸಿದ ಯಾವುದೇ ಹಡಗುಕಟ್ಟೆ, ಬರ್ತ್, ಸರಕುಕಟ್ಟೆ, ಬಂದರು ಕಟ್ಟೆ, ಸ್ಟೇಜು, ಬಂದರುಕಾಪು, ಹಡಗು ಇಳಿದಾಣ ಅಥವಾ ಲಂಗರು ಸ್ಥಳದ ಬಳಕೆಯು ಕಾನೂನುಬಾಹಿರವೆಂದು ಆಗಿರುವಲ್ಲಿ, ಮಂಡಳಿಯು ಸಂಬಂಧಿಸಿದ ವ್ಯಕ್ತಿಯ ಅಹವಾಲನ್ನು ಕೇಳಿದ ತರುವಾಯ, ಆದೇಶದ ಮೂಲಕ ಅಂಥ ಹಡಗುಕಟ್ಟೆ, ಬರ್ತ್, ಸರಕುಕಟ್ಟೆ, ಬಂದರುಕಟ್ಟೆ, ಸ್ಟೇಜು, ಬಂದರುಕಾಪು, ಹಡಗು ಇಳಿದಾಣ ಅಥವಾ ಲಂಗರು ಸ್ಥಳವನ್ನು ಮುಚ್ಚಬಹುದು, ತೆಗೆದುಹಾಕಬಹುದು, ತುಂಬಿಡಬಹುದು ಅಥವಾ ನಾಶಪಡಿಸಬಹುದು, ಅಥವಾ ಅಂಥ ವ್ಯಕ್ತಿಗೆ ಮಂಡಳಿಯು, ತಾನು ನಿರ್ಧರಿಸಬಹುದಾದಂಥ ದರಗಳು ಮತ್ತು ವೆಚ್ಚಗಳನ್ನು ಸಂದಾಯಮಾಡಿದ ಮೇಲೆ ಅವುಗಳನ್ನು ಉಪಯೋಗಿಸಲು ಅನುಮತಿಯನ್ನು ನೀಡಬಹುದು.

(2) (3)ನೇ ಉಪ ಪ್ರಕರಣದ ಅಡಿಯಲ್ಲಿ ಅನ್ಯಥಾ ಉಪಬಂಧಿಸಿರುವುದನ್ನುಳಿದು ಯಾವೊಬ್ಬ ವ್ಯಕ್ತಿಯು, (1)ನೇ ಉಪ ಪ್ರಕರಣದ ಅಡಿಯಲ್ಲಿ ಮಾಡಲಾದ ಯಾವುದೇ ಆದೇಶದಿಂದ ಉಂಟಾದ ಅಥವಾ ಉಂಟಾಗಿದೆ ಎಂದು ಹೇಳಲಾದ ಯಾವುದೇ ಕ್ಷತಿ, ಹಾನಿ ಅಥವಾ ನಷ್ಟಕ್ಕಾಗಿ ನಷ್ಟಪರಿಹಾರ ಕೇಳಲು ಹಕ್ಕುಳ್ಳವನಾಗಿರತಕ್ಕದ್ದಲ್ಲ.

(3) ಯಾವೊಬ್ಬ ವ್ಯಕ್ತಿಯು ಯಾವುದೇ ಅಂಥ ಹಡಗು ಕಟ್ಟೆ, ಬರ್ತ್, ಸರಕುಕಟ್ಟೆ, ಬಂದರು ಕಟ್ಟೆ, ಸ್ಟೇಜು, ಬಂದರು ಕಾಪು, ಹಡಗು ಇಳಿದಾಣ ಅಥವಾ ಲಂಗರು ಸ್ಥಳವನ್ನು ಅಂಥ ಅನುಮತಿಯನ್ನು ನೀಡಲು ಅಧಿಕಾರವುಳ್ಳ ಸಕ್ಷಮವಾದ ಪ್ರಾಧಿಕಾರದ ಪೂರ್ವಾನುಮತಿಯೊಂದಿಗೆ ರಚಿಸಲಾಗಿದೆ, ಸ್ಥಾಪಿಸಲಾಗಿದೆ ಅಥವಾ ನಿರ್ಮಿಸಲಾಗಿದೆ ಎಂದು ಮಂಡಳಿಗೆ ಮನದಟ್ಟಾಗುವಂತೆ ರುಜುವಾತು ಮಾಡಿದರೆ, ಅವನಿಗೆ ಮಂಡಳಿಯು, ಈ ಮುಂದೆ ನಿರೂಪಿಸಿದ ತತ್ವಗಳಿಗೆ ಅನುಸಾರವಾಗಿ ಮತ್ತು ಆ ರೀತಿಯಲ್ಲಿ ನಿರ್ಧರಿಸಲಾದಂಥ ಮೊತ್ತದ ನಷ್ಟಪರಿಹಾರವನ್ನು ಪಾವತಿ ಮಾಡತಕ್ಕದ್ದು, ಅವುಗಳೆಂದರೆ :–

(ಎ) ನಷ್ಟ ಪರಿಹಾರವನ್ನು ಲೆಕ್ಕಹಾಕುವಾಗ ಅಂಥ ವ್ಯಕ್ತಿಯು ಮಂಡಳಿಯು ಒದಗಿಸಿದ ಯಾವುದೇ ಹಡಗುಕಟ್ಟೆ, ಬರ್ತ್, ಸರಕುಕಟ್ಟೆ, ಬಂದರುಕಟ್ಟೆ, ಸ್ಟೇಜು, ಬಂದರುಕಾಪು, ಹಡಗು ಇಳಿದಾಣ ಅಥವಾ ಲಂಗರು ಸ್ಥಳವನ್ನು ಉಪಯೋಗಿಸಲು ಸಂದಾಯ ಮಾಡಲು ಬದ್ಧನಾಗಿರುವ ಯಾವುದೇ ದರ ಅಥವಾ ವೆಚ್ಚಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದಲ್ಲ.

(ಬಿ) ನಷ್ಟ ಪರಿಹಾರದ ಮೊಬಲಗನ್ನು ಅಂಥ ಹಡಗುಕಟ್ಟೆ, ಬರ್ತ್, ಸರಕುಕಟ್ಟೆ, ಬಂದರುಕಟ್ಟೆ, ಸ್ಟೇಜು, ಬಂದರು ಕಾಪು, ಹಡಗು ಇಳಿದಾಣ ಅಥವಾ ಲಂಗರು ಸ್ಥಳ – ಇವುಗಳ ನಿರ್ಮಾಣ ವೆಚ್ಚಕ್ಕೆ ಸಂಬಂಧಿಸಿದಂತೆ ಲೆಕ್ಕಹಾಕತಕ್ಕದ್ದು.

(ಸಿ) ನಷ್ಟಪರಿಹಾರದ ಮೊಬಲಗನ್ನು ಒಪ್ಪಂದದ ಮೂಲಕ ನಿಗದಿಮಾಡಬಹುದಾಗಿದ್ದರೆ, ಅದನ್ನು ಅಂಥ ಒಪ್ಪಂದಕ್ಕೆ ಅನುಸಾರವಾಗಿ ಸಂದಾಯ ಮಾಡತಕ್ಕದ್ದು.

(ಡಿ) ಅಂಥ ಯಾವುದೇ ಒಪ್ಪಂದಕ್ಕೆ ಬರಲಾಗದಿದ್ದಲ್ಲಿ ಉಚ್ಚನ್ಯಾಯಾಲಯದ ನ್ಯಾಯಾಧೀಶರಾಗಿರುವ ಅಥವಾ ಆಗಿದ್ದ ಅಥವಾ ಹಾಗೆ ನೇಮಕಗೊಳ್ಳಲು ಅರ್ಹರಾಗಿರುವ ವ್ಯಕ್ತಿಯನ್ನು ಮಧ್ಯಸ್ಥಗಾರನೆಂಬುದಾಗಿ ಸರ್ಕಾರವು ನೇಮಕಮಾಡತಕ್ಕದ್ದು.

(ಇ) ಯಾವುದೇ ನಿರ್ದಿಷ್ಟ ಪ್ರಕರಣದಲ್ಲಿ, ಈ ಪ್ರಕರಣದ ಅಡಿಯಲ್ಲಿ ಮಧ್ಯಸ್ಥಗಾರನು ತೀರ್ಮಾನಿಸಬೇಕಾದ ಯಾವುದೇ ಪ್ರಶ್ನೆಯ ಇತ್ಯರ್ಥಕ್ಕೆ ಸಹಾಯವಾಗಲೆಂದು ವಿಚಾರಣೆಯಲ್ಲಿರುವ ಯಾವುದೇ ಪ್ರಕರಣದ, ಯಾವುದೇ ವಿಷಯದ ಬಗ್ಗೆ ವಿಶೇಷ ತಿಳುವಳಿಕೆಯನ್ನು ಹೊಂದಿರುವ ವ್ಯಕ್ತಿಯನ್ನು ಸರ್ಕಾರವು ನಾಮನಿರ್ದೇಶನ ಮಾಡಬಹುದು ಮತ್ತು ಹಾಗೆ ಒಂದು ನಾಮನಿರ್ದೇಶನವನ್ನು ಮಾಡಿದಲ್ಲಿ, ಆಗ ಯಾರಿಗೆ ನಷ್ಟಪರಿಹಾರ ಸಂದಾಯವಾಗಬೇಕೋ ಆ ವ್ಯಕ್ತಿಯೂ ಅದೇ ಉದ್ದೇಶಕ್ಕಾಗಿ ಒಬ್ಬ ಮೌಲ್ಯನಿರ್ಧಾರಕನನ್ನು ನಾಮನಿರ್ದೇಶನ ಮಾಡಬಹುದು.

(ಎಫ್) ಮಧ್ಯಸ್ಥಗಾರನ ಮುಂದೆ ವ್ಯವಹರಣೆಯು ಪ್ರಾರಂಭವಾಗುವಾಗ ಮಂಡಳಿಯು ಮತ್ತು ನಷ್ಟ ಪರಿಹಾರ ಪಡೆಯಬೇಕಾದ ವ್ಯಕ್ತಿಯು ತಮ್ಮ ತಮ್ಮ ಅಭಿಪ್ರಾಯದ ಪ್ರಕಾರ ನಷ್ಟ ಪರಿಹಾರದ ನ್ಯಾಯಯುತ ಮೊಬಲಗು ಏನೆಂಬುದನ್ನು ಹೇಳತಕ್ಕದ್ದು.

(ಜಿ) ವಿವಾದದ ವಿಚಾರಣೆ ಮಾಡಿದ ತರುವಾಯ ಮಧ್ಯಸ್ಥಗಾರನು, ತನಗೆ ನ್ಯಾಯಸಮ್ಮತವೆಂದು ಕಂಡುಬಂದ ನಷ್ಟಪರಿಹಾರದ ಮೊಬಲಗನ್ನು ನಿರ್ಧರಿಸಿ ಐತೀರ್ಪು ನೀಡತಕ್ಕದ್ದು ಮತ್ತು ಅಂಥ ನಷ್ಟಪರಿಹಾರವನ್ನು ಯಾವ ವ್ಯಕ್ತಿ ಅಥವಾ ವ್ಯಕ್ತಿಗಳಿಗೆ ಸಂದಾಯ ಮಾಡುವುದೆಂಬುದನ್ನು ನಿರ್ದಿಷ್ಟ ಪಡಿಸತಕ್ಕದ್ದು.

(ಎಚ್) ಯಾವ ವ್ಯಕ್ತಿ ಅಥವಾ ವ್ಯಕ್ತಿಗಳು ನಷ್ಟಪರಿಹಾರಕ್ಕೆ ಹಕ್ಕುದಾರರು ಎಂಬ ಬಗ್ಗೆ ವಿವಾದವಿದ್ದಲ್ಲಿ, ಮಧ್ಯಸ್ಥಗಾರನು ಅಂಥ ವಿವಾದವನ್ನು ತೀರ್ಮಾನಿಸತಕ್ಕದ್ದು ಮತ್ತು ಒಬ್ಬನಿಗಿಂತ ಹೆಚ್ಚು ವ್ಯಕ್ತಿಗಳು ನಷ್ಟ ಪರಿಹಾರಕ್ಕೆ ಹಕ್ಕುದಾರರಾಗಿದ್ದಾರೆಂದು ಮಧ್ಯಸ್ಥಗಾರನಿಗೆ ಕಂಡುಬಂದರೆ, ಅವನು, ಆ ಮೊಬಲಗನ್ನು ಅಂಥ ವ್ಯಕ್ತಿಗಳ ನಡುವೆ ಭಾಗಮಾಡತಕ್ಕದ್ದು.

(ಐ) ಮಧ್ಯಸ್ಥಿಕೆ ಮತ್ತು ಸಂಧಾನ ಅಧಿನಿಯಮ, 1996 ರಲ್ಲಿ ಇರುವ ಯಾವುದೂ ಈ ಪ್ರಕರಣದ ಅಡಿಯಲ್ಲಿ ಮಾಡಿದ ಮಧ್ಯಸ್ಥಿಕೆಗಳಿಗೆ ಅನ್ವಯವಾಗತಕ್ಕದ್ದಲ್ಲ.

(ಜೆ) ಈ ಪ್ರಕರಣದ ಅಡಿಯಲ್ಲಿ ನೇಮಕಗೊಂಡ ಮಧ್ಯಸ್ಥಗಾರನು, ಈ ಅಧಿನಿಯಮದ ಅಡಿಯಲ್ಲಿ ಮಧ್ಯಸ್ಥಿಕೆಯ ವ್ಯವಹರಣೆಗಳನ್ನು ನಡೆಸುವಾಗ, ಈ ಮುಂದಿನ ವಿಷಯಗಳ ಸಂಬಂಧದಲ್ಲಿ ಸಿವಿಲ್ ಪ್ರಕ್ರಿಯಾ ಸಂಹಿತೆ, 1908ರ ಅಡಿಯಲ್ಲಿ ದಾವೆಯನ್ನು ವಿಚಾರಣೆ ಮಾಡುವಾಗ ಸಿವಿಲ್ ನ್ಯಾಯಾಲಯವು ಹೊಂದಿರುವ ಎಲ್ಲಾ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(i) ಯಾವೊಬ್ಬ ವ್ಯಕ್ತಿಯನ್ನು ಸಮನು ಮಾಡುವುದು ಮತ್ತು ಆತ ತಪ್ಪದೆ ಹಾಜರಾಗುವಂತೆ ಒತ್ತಾಯಿಸುವುದು ಮತ್ತು ಪ್ರಮಾಣ ಮಾಡಿಸಿ ಅವನ ವಿಚಾರಣೆ ಮಾಡುವುದು ;

(ii) ದಸ್ತಾವೇಜುಗಳನ್ನು ಪತ್ತೆ ಮಾಡುವಂತೆ ಮತ್ತು ಹಾಜರುಪಡಿಸುವಂತೆ ಅಗತ್ಯ ಪಡಿಸುವುದು;

(iii) ಅಫಿದಾವಿತ್ತಿನ ಮೇಲೆ ಸಾಕ್ಷ್ಯವನ್ನು ಸ್ವೀಕರಿಸುವುದು ;

(iv) ಸಾಕ್ಷಿಗಳ ವಿಚಾರಣೆ ಅಥವಾ ದಸ್ತಾವೇಜುಗಳ ಪರಿಶೀಲನೆಗಾಗಿ ಕಮಿಷನುಗಳನ್ನು ಹೊರಡಿಸುವುದು.

(ಕೆ) ಪ್ರತಿಯೊಂದು ಐತೀರ್ಪಿನಲ್ಲೂ ಈ ಪ್ರಕರಣದ ಅಡಿಯಲ್ಲಿನ ಮಧ್ಯಸ್ಥಿಕೆ ವ್ಯವಹರಣೆಗಳಲ್ಲಿ ಮಾಡಲಾದ ವೆಚ್ಚಗಳ ಮೊಬಲಗನ್ನು ಮತ್ತು ಅವುಗಳನ್ನು ಯಾವ ವ್ಯಕ್ತಿಗಳು ಮತ್ತು ಯಾವ ಅನುಪಾತದಲ್ಲಿ ಸಂದಾಯ ಮಾಡಬೇಕೆಂಬುದನ್ನು ಸಹ ತಿಳಿಸತಕ್ಕದ್ದು ;

(ಎಲ್) ಈ ಪ್ರಕರಣದ ಅಡಿಯಲ್ಲಿ ಮಾಡಲಾದ ಮಧ್ಯಸ್ಥಗಾರನ ಐತೀರ್ಪಿನಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು, ಆ ಐತೀರ್ಪಿನ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಕರ್ನಾಟಕ ಉಚ್ಚ ನ್ಯಾಯಾಲಯಕ್ಕೆ ಅಪೀಲು ಸಲ್ಲಿಸಬಹುದು:

ಪರಂತು, ಸದರಿ ಮೂವತ್ತು ದಿನಗಳ ಕಾಲಾವಧಿಯು ಮುಕ್ತಾಯವಾದ ತರುವಾಯವೂ, ಸಕಾಲದಲ್ಲಿ ಅಪೀಲು ಸಲ್ಲಿಸದಿರುವುದಕ್ಕೆ ಅಪೀಲುದಾರನಿಗೆ ಸಾಕಷ್ಟು ಕಾರಣಗಳಿದ್ದವೆಂದು ಉಚ್ಚನ್ಯಾಯಾಲಯವು ಮನಗಂಡರೆ, ಅದು ಅಪೀಲನ್ನು ಸ್ವೀಕರಿಸಬಹುದು.

## ಅಧ್ಯಾಯ – VI

### ಬಂದರುಗಳಲ್ಲಿ ದರಗಳನ್ನು ವಿಧಿಸುವುದು ಮತ್ತು ವಸೂಲಿಮಾಡುವುದು

**37. ಮಂಡಳಿ ಅಥವಾ ಇತರ ವ್ಯಕ್ತಿಯು ನೆರವೇರಿಸಿದ ಸೇವೆಗಳಿಗಾಗಿ ದರಗಳ ಶ್ರೇಣಿ.–** (1) ಮಂಡಳಿಯು, ಬಂದರಿನಲ್ಲಿ ಅಥವಾ ಅವುಗಳಿಗೆ ಸಂಬಂಧಪಟ್ಟಂತೆ ಬಂದರು ಅಥವಾ ಸಂಪರ್ಕಗಳಲ್ಲಿ ಈ ಕೆಳಗೆ ನಿರ್ದಿಷ್ಟಪಡಿಸಿದ ಯಾವುದೇ ಸೇವೆಗಳನ್ನು ಸ್ವತಃ ತಾನು ಅಥವಾ 32ನೇ ಪ್ರಕರಣದ ಅಡಿಯಲ್ಲಿ ಅಧಿಕೃತಗೊಂಡ ಯಾವೊಬ್ಬ ವ್ಯಕ್ತಿಯು, ಯಾವ ದರಗಳಲ್ಲಿ ಮತ್ತು ಯಾವ ಷರತ್ತುಗಳ ಮೇರೆಗೆ ನೆರವೇರಿಸುವರೆಂಬುದನ್ನು ತಿಳಿಸುವ ದರಗಳ ಪಟ್ಟಿಯನ್ನು ಮತ್ತು ಷರತ್ತುಗಳ ಪಟ್ಟಿಯನ್ನು ವಿನಿಯಮದ ಮೂಲಕ ಕಾಲಕಾಲಕ್ಕೆ ರೂಪಿಸತಕ್ಕದ್ದು,–

(ಎ) ಬಂದರು ಅಥವಾ ಬಂದರು ಸಂಪರ್ಕಗಳಲ್ಲಿನ ನೌಕೆಗಳ ನಡುವೆ ಪ್ರಯಾಣಿಕರನ್ನು ಅಥವಾ ಸರಕುಗಳನ್ನು ಪರಸ್ಪರ ಒಂದರಿಂದೊಂದಕ್ಕೆ ಸಾಗಿಸುವುದು ;

(ಬಿ) ಮಂಡಳಿಯ ಸ್ವಾಧೀನದಲ್ಲಿರುವ ಅಥವಾ ಅನುಭೋಗದಲ್ಲಿರುವ ಅಥವಾ ಬಂದರು ಅಥವಾ ಬಂದರು ಸಂಪರ್ಕಗಳ ಪರಿಮಿತಿಯೊಳಗಿರುವ ಯಾವುದೇ ಹಡಗುಕಟ್ಟೆ, ಬರ್ತ್, ಸರಕು ಕಟ್ಟೆ, ಬಂದರುಕಟ್ಟೆ, ಸ್ಟೇಜು, ಬಂದರುಕಾಪು, ಹಡಗು ಇಳಿದಾಣ ಅಥವಾ ಲಂಗರುಸ್ಥಳಗಳು, ಜಮೀನು ಅಥವಾ ಕಟ್ಟಡಗಳಿಂದ ಅಥವಾ ಅವುಗಳಿಗೆ ಅಂಥ ನೌಕೆಗಳಿಂದ ಅಥವಾ ನೌಕೆಗಳಿಗೆ ಪ್ರಯಾಣಿಕರನ್ನು ಅಥವಾ ಸರಕುಗಳನ್ನು ಹೊತ್ತು ಸಾಗಿಸುವುದು ಇಳಿಸುವುದು ಮತ್ತು ಸಾಗಿಸುವುದು,

(ಸಿ) ಯಾವುದೇ ಅಂಥ ಸ್ಥಳದ ಮೇಲೆ ಸರಕುಗಳ ಕ್ರೇನು ಬಾಡಿಗೆ ಅಥವಾ ಹೊರುವ ಮಜೂರಿ;

(ಡಿ) ಯಾವುದೇ ಅಂಥ ಸ್ಥಳದ ಮೇಲೆ ಸರಕುಗಳ ಹಡಗುಕಟ್ಟೆ ಬಾಡಿಗೆ, ದಾಸ್ತಾನಿನ ಬಾಡಿಗೆ ಅಥವಾ ವಿಳಂಬಶುಲ್ಕ (ಡೆಮರೇಜ್);

(ಇ) ಭಾರತೀಯ ಬಂದರುಗಳ ಅಧಿನಿಯಮ, 1908ರ ಅಡಿಯಲ್ಲಿ ಫೀಜುಗಳನ್ನು ವಿಧಿಸತಕ್ಕ ನೌಕೆಗಳಿಗೆ ಸಂಬಂಧಿಸಿದ ಸೇವೆಗಳನ್ನು ಹೊರತುಪಡಿಸಿ, ನೌಕೆಗಳ, ಪ್ರಯಾಣಿಕರ ಅಥವಾ ಸರಕುಗಳ ಸಂಬಂಧದಲ್ಲಿನ ಯಾವುದೇ ಇತರ ಸೇವೆ.

(2) ಬೇರೆ ಬೇರೆ ವರ್ಗಗಳ ಸರಕುಗಳಿಗೆ ಮತ್ತು ನೌಕೆಗಳಿಗೆ ಹಾಗೂ ಬೇರೆಬೇರೆ ಬಂದರುಗಳಿಗೆ ಬೇರೆ ಬೇರೆ ದರಶ್ರೇಣಿಯನ್ನು ಮತ್ತು ಷರತ್ತುಗಳನ್ನು ರೂಪಿಸಬಹುದು.

**38. ಮಂಡಳಿಗೆ ಸೇರಿದ ಸ್ವತ್ತುಗಳ ಬಳಕೆಗಾಗಿ ದರ ಶ್ರೇಣಿ ಮತ್ತು ಷರತ್ತುಗಳಪಟ್ಟಿ.–** (1) ಮಂಡಳಿಯು, ತನಗೆ ಸೇರಿದ ಅಥವಾ ಸ್ವಾಧೀನದಲ್ಲಿರುವ ಅಥವಾ ಅನುಭೋಗದಲ್ಲಿರುವ ಯಾವುದೇ ಸ್ವತ್ತನ್ನು ಅಥವಾ ಬಂದರಿನ ಅಥವಾ ಬಂದರು ಮಾರ್ಗದ ಪರಿಮಿತಿಯಲ್ಲಿನ ಯಾವುದೇ ಸ್ಥಳವನ್ನು ಈ ಮುಂದಿನ ಉದ್ದೇಶಗಳಿಗಾಗಿ ಯಾವ ದರಗಳ ಸಂದಾಯದ ಮೇಲೆ ಮತ್ತು ಯಾವ ಷರತ್ತುಗಳ ಅಡಿಯಲ್ಲಿ ಬಳಸಬಹುದೆಂಬುದನ್ನು ಕಾಲಕಾಲಕ್ಕೆ ವಿನಿಯಮಗಳ ಮೂಲಕ ಗೊತ್ತುಪಡಿಸಬಹುದು, ಎಂದರೆ :–

(ಎ) ಯಾವುದೇ ತೇಲು ಗುರುತು, ಸ್ಥಾಯಿಲಂಗರು, ಹಡಗುಕಟ್ಟೆ, ಸರಕುಕಟ್ಟೆ, ಹಡಗು ಇಳಿದಾಣ, ಜಮೀನು, ಕಟ್ಟಡ ಅಥವಾ ಮೇಲೆ ಹೇಳಿದ ರೀತಿಯಲ್ಲಿ ನೌಕೆಯ ಮೂಲಕವಾಗಿ ಪ್ರವೇಶಿಸುವುದು, ಅಲ್ಲಿ ಅಥವಾ ಅದರ ಮಗ್ಗುಲಿಗೆ ನಿಲ್ಲಿಸುವುದು ;

(ಬಿ) ಪ್ರಯಾಣಿಕರನ್ನು ಅಥವಾ ಸರಕುಗಳನ್ನು ಸಾಗಿಸುವ ಪ್ರಾಣಿಗಳಿಂದ ಅಥವಾ ವಾಹನಗಳಿಂದ ಮೇಲೆ ಹೇಳಿದ ಯಾವುದೇ ಹಡಗುಕಟ್ಟೆ, ಬಂದರುಕಟ್ಟೆ, ಹಡಗು ಇಳಿದಾಣ, ಸರಕುಕಟ್ಟೆ, ಜಮೀನು, ಕಟ್ಟಡ, ರಸ್ತೆ, ಸೇತುವೆ, ಬಂದರು ಸಂಪರ್ಕ ಅಥವಾ ಮೇಲೆ ಹೇಳಿದ ಸ್ಥಳಗಳಿಗೆ ಬರುವುದು ಅಥವಾ ಬಾಡಿಗೆಗೆ ಓಡಿಸುವುದು ;

(ಸಿ) ಆಮದು ಮಾಡಿಕೊಂಡ ಅಥವಾ ರಫ್ತು ಮಾಡಲು ಉದ್ದೇಶಿಸಿದ ಸರಕುಗಳ ಮಾಲೀಕರು ಅಥವಾ ಸ್ಟೀಮರ್ ಏಜೆಂಟರುಗಳಿಂದ ಮತ್ತು ಸರಕುಗಳನ್ನು ಎತ್ತಿ ಇಳಿಸುವವರು ಜಮೀನನ್ನು ಅಥವಾ ಷೆಡ್‌ಗಳನ್ನು ಗುತ್ತಿಗೆಗೆ ಪಡೆಯುವುದು;

(ಡಿ) ಮಂಡಳಿಗೆ ಸೇರಿದ ಅಥವಾ ಮಂಡಳಿಯಿಂದ ಒದಗಿಸಲಾದ ಯಾವುದೇ ಜಮೀನು, ಕಟ್ಟಡ, ಕಾಮಗಾರಿಗಳು, ಹಡಗುಗಳು ಅಥವಾ ಸಾಧನ ಸಲಕರಣೆಗಳ ಯಾವುದೇ ಇತರ ಬಳಕೆ.

(2) ವಿವಿಧ ವರ್ಗಗಳ ಸರಕುಗಳಿಗೆ ಮತ್ತು ನೌಕೆಗಳಿಗೆ ಮತ್ತು ವಿವಿಧ ಬಂದರುಗಳಿಗೆ ವಿವಿಧ ದರಶ್ರೇಣಿಗಳನ್ನು ಮತ್ತು ಷರತ್ತುಗಳನ್ನು ವಿನಿಯಮಗಳ ಮೂಲಕ ಗೊತ್ತುಪಡಿಸಬಹುದು.

**39. ಸೇವೆಗಳ ಸಂಯೋಜನೆಗಾಗಿ ಸಂಚಿತ ದರಗಳು.–** ಮಂಡಳಿಯು, ಕಾಲಕಾಲಕ್ಕೆ, 37ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಸೇವೆಗಳ ಯಾವುದೇ ಸಂಯೋಜನೆಗಾಗಿ ಅಥವಾ 38ನೇ ಪ್ರಕರಣದಲ್ಲಿ ನಿರ್ದಿಷ್ಟ ಪಡಿಸಿದಂತೆ, ಮಂಡಳಿಗೆ ಸೇರಿದ ಅಥವಾ ಅದರ ಸ್ವಾಧೀನದಲ್ಲಿ ಅಥವಾ ಅನುಭೋಗದಲ್ಲಿರುವ ಯಾವುದೆ ಸ್ವತ್ತನ್ನು ಬಳಸಲು ಅನುಮತಿ ನೀಡುವುದಕ್ಕೆ ಅಥವಾ ಯಾವುದೇ ಬಳಕೆದಾರನೊಂದಿಗೆ ಅಂಥ ಸೇವೆ ಅಥವಾ ಸೇವೆಗಳ ಯಾವುದೇ ಸಂಯೋಜನೆಗೆ ಒಂದು ಸಂಚಿತ ದರಶ್ರೇಣಿಯನ್ನು ವಿನಿಯಮದ ಮೂಲಕ ಗೊತ್ತುಪಡಿಸಬಹುದು.

**40. ಕೆಲವು ಪ್ರಕರಣಗಳಲ್ಲಿ ರಿಯಾಯಿತಿ ದರಗಳನ್ನು ವಿಧಿಸುವ ಅಧಿಕಾರ.–** ಈ ಅಧ್ಯಾಯದ ಈ ಹಿಂದಿನ ಯಾವುವೇ ಉಪಬಂಧಗಳ ಅಡಿಯಲ್ಲಿ ಶ್ರೇಣಿಯನ್ನು ರಚಿಸುವಲ್ಲಿ, ಮಂಡಳಿಯು, ಈ ಮುಂದಿನವುಗಳ ಸಂಬಂಧದಲ್ಲಿ ಕಡಿಮೆ ದರವನ್ನು ನಿಗದಿ ಪಡಿಸಬಹುದು, ಎಂದರೆ :–

(ಎ) ಕರಾವಳಿ ಸರಕುಗಳ, ಎಂದರೆ, ಸೀಮಾಶುಲ್ಕ ಅಧಿನಿಯಮ, 1962 ರಲ್ಲಿ ಪರಿಭಾಷಿಸಲಾದ ಆಮದು ಸರಕುಗಳನ್ನು ಹೊರತುಪಡಿಸಿ, ಭಾರತದ ಒಂದು ಬಂದರಿನಿಂದ ಇನ್ನೊಂದು ಬಂದರಿಗೆ ನೌಕೆಯ ಮೂಲಕ ಸಾಗಿಸುತ್ತಿರುವ ಸರಕುಗಳು :

ಪರಂತು, ಮಂಡಳಿಯು, ಈ ಪ್ರಕರಣದ ಅಡಿಯಲ್ಲಿ ಕಡಿಮೆ ದರವನ್ನು ನಿಗದಿಪಡಿಸುವಲ್ಲಿ ಭಾರತದ ಒಂದು ಬಂದರಿಗೂ ಇನ್ನೊಂದು ಬಂದರಿಗೂ ತಾರತಮ್ಯ ಮಾಡತಕ್ಕದ್ದಲ್ಲ.

(ಬಿ) ವಿಶೇಷ ಪ್ರಕರಣಗಳಲ್ಲಿ ಇತರೆ ಸರಕುಗಳು.

**41. ದರಶ್ರೇಣಿ ಮತ್ತು ಷರತ್ತುಗಳು.–** ಈ ಅಧ್ಯಾಯದ, ಪೂರ್ವೋಕ್ತ ಉಪಬಂಧಗಳ ಅಡಿಯಲ್ಲಿ ಮಂಡಳಿಯು ರಚಿಸಿದ ಪ್ರತಿಯೊಂದು ದರಶ್ರೇಣಿ ಮತ್ತು ಪ್ರತಿಯೊಂದು ಷರತ್ತುಗಳ ಪಟ್ಟಿಯನ್ನು ಮಂಜೂರಾತಿಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು ಮತ್ತು ಹಾಗೆ ಮಂಜೂರಾದ ಮೇಲೆ ಅದನ್ನು ಸರ್ಕಾರಿ ರಾಜ್ಯಪತ್ರದಲ್ಲಿ ಮಂಡಳಿಯು ಪ್ರಕಟಿಸಿದಾಗ ಅವು ಪರಿಣಾಮಕಾರಿಯಾಗತಕ್ಕದ್ದು.

**42. ದರಗಳ ಮಾರ್ಪಾಟು ಮಾಡಬೇಕೆಂದು ಅಥವಾ ರದ್ದುಮಾಡಬೇಕೆಂದು ಅಗತ್ಯಪಡಿಸುವುದಕ್ಕೆ ಸರ್ಕಾರದ ಅಧಿಕಾರ.–** (1) ಸರ್ಕಾರವು, ತಾನು ಹಾಗೆ ಮಾಡುವುದು ಸಾರ್ವಜನಿಕ ಹಿತದೃಷ್ಟಿಯಿಂದ ಅವಶ್ಯಕವೆಂದು ಪರಿಗಣಿಸಿದಾಗಲೆಲ್ಲಾ ಅದು, ಆ ಸಂಬಂಧದಲ್ಲಿ ಕಾರಣಗಳ ವಿವರಣೆಯೊಂದಿಗೆ ಲಿಖಿತದಲ್ಲಿ ಆದೇಶದ ಮೂಲಕ, ಜಾರಿಯಲ್ಲಿರುವ ಯಾವುದೇ ದರಶ್ರೇಣಿಯನ್ನು ಸರ್ಕಾರವು ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ಅವಧಿಯೊಳಗೆ ರದ್ದುಪಡಿಸುವಂತೆ ಅಥವಾ ಮಾರ್ಪಡಿಸುವಂತೆ ಮಂಡಳಿಗೆ ನಿರ್ದೇಶಿಸಬಹುದು.

(2) ಅಂಥ ನಿರ್ದೇಶನವನ್ನು ನಿರ್ದಿಷ್ಟ ಅವಧಿಯೊಳಗೆ ಪಾಲಿಸಲು ಮಂಡಳಿಯು ತಪ್ಪಿದಲ್ಲಿ, ಸರ್ಕಾರವು ಅಂಥ ಶ್ರೇಣಿಗಳನ್ನು ರದ್ದುಪಡಿಸಬಹುದು ಅಥವಾ ತಾನು ಸೂಕ್ತವೆಂದು ಭಾವಿಸುವಂತೆ ಅದಕ್ಕೆ ಅಂಥ ಮಾರ್ಪಾಟುಗಳನ್ನು ಮಾಡಬಹುದು:

ಪರಂತು, ಯಾವುದೇ ದರಶ್ರೇಣಿಯನ್ನು ಹಾಗೆ ರದ್ದುಗೊಳಿಸುವುದಕ್ಕಿಂತ ಅಥವಾ ಮಾರ್ಪಾಟು ಮಾಡುವುದಕ್ಕಿಂತ ಮೊದಲು ನಿರ್ದಿಷ್ಟಪಡಿಸಿದ ಅವಧಿಯಲ್ಲಿ ಮಂಡಳಿಯು ಮಾಡಬಹುದಾದ ಯಾವುದೇ ಆಕ್ಷೇಪಣೆ ಅಥವಾ ಸಲಹೆಯನ್ನು ಸರ್ಕಾರವು ಪರಿಗಣಿಸತಕ್ಕದ್ದು.

(3) ಈ ಪ್ರಕರಣದ ಅನುಸರಣೆಯಲ್ಲಿ ದರಶ್ರೇಣಿಯಲ್ಲಿ ಯಾವುದನ್ನಾದರೂ ರದ್ದುಪಡಿಸಿದರೆ ಅಥವಾ ಮಾರ್ಪಾಟುಗೊಳಿಸಿದರೆ, ಹಾಗೆ ರದ್ದು ಮಾಡಿರುವುದನ್ನು ಅಥವಾ ಮಾರ್ಪಾಟು ಮಾಡಿರುವುದನ್ನು ಸರ್ಕಾರವು, ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಿಸತಕ್ಕದ್ದು ಮತ್ತು ಆ ತರುವಾಯ ಅದು ಆ ರೀತಿಯಲ್ಲಿಯೇ ಪರಿಣಾಮಕಾರಿಯಾಗಿರತಕ್ಕದ್ದು.

**43. ದರಗಳನ್ನು ಅಥವಾ ಚಾರ್ಜುಗಳನ್ನು ಮಾಫಿ ಮಾಡುವುದು.–** ಮಂಡಳಿಯು, ವಿಶೇಷ ಪ್ರಕರಣಗಳಲ್ಲಿ ಮತ್ತು ಈ ಬಗ್ಗೆ ರಚಿಸಲಾದ ವಿನಿಯಮಗಳಿಗೆ ಒಳಪಟ್ಟು ಈ ಅಧಿನಿಯಮದ ಅಡಿಯಲ್ಲಿ ಜಾರಿಯಲ್ಲಿರುವ ಯಾವುದೇ ದರಶ್ರೇಣಿಯಂತೆ ಯಾವುವೇ ಸರಕುಗಳು, ವಾಹನಗಳು ಅಥವಾ ನೌಕೆಗಳು ಅಥವಾ ಸರಕುಗಳ, ವಾಹನಗಳ ಅಥವಾ ನೌಕೆಗಳ ವರ್ಗಕ್ಕೆ ಅವುಗಳ ಸಂಬಂಧದಲ್ಲಿ ವಿಧಿಸಬಹುದಾದ ಯಾವುದೇ ದರದ ಅಥವಾ ಯಾವುದೇ ಚಾರ್ಜಿನ ಸಂದಾಯದಿಂದ, ಸಂಪೂರ್ಣ ಅಥವಾ ಭಾಗಶಃ ವಿನಾಯಿತಿ ನೀಡಬಹುದು ಅಥವಾ ಹಾಗೆ ವಿಧಿಸಲಾದ ಅಂಥ ದರ ಅಥವಾ ಚಾರ್ಜ್‌ಗಳನ್ನು ಸಂಪೂರ್ಣ ಅಥವಾ ಭಾಗಶಃ ಮಾಫಿ ಮಾಡಬಹುದು.

**44. ಹೆಚ್ಚುವರಿ ಚಾರ್ಜುಗಳ ಮರುಪಾವತಿ.–** ಯಾವೊಬ್ಬ ವ್ಯಕ್ತಿಯೂ ತಾನು ಸಂದಾಯ ಮಾಡುವ ದಿನಾಂಕದಿಂದ ಆರು ತಿಂಗಳೊಳಗೆ ಮಂಡಳಿಗೆ ತಾನು ಅಥವಾ ತನ್ನ ಪರವಾಗಿ, ಲಿಖಿತದಲ್ಲಿ ತನ್ನ ಕ್ಲೇಮನ್ನು ಸಂಬಂಧದಟ್ಟ ಮೂಲ ದಸ್ತಾವೇಜುಗಳ ಬೆಂಬಲದೊಡನೆ ಸಲ್ಲಿಸಿದ ಹೊರತು ಮಂಡಳಿಯು ಮಾಡಿದ ಹೆಚ್ಚುವರಿ ಚಾರ್ಜುಗಳ ಮರು ಸಂದಾಯಕ್ಕೆ ಹಕ್ಕುಳ್ಳವನಾಗತಕ್ಕದ್ದಲ್ಲ :

ಪರಂತು, ಮಂಡಳಿಯು, ತನ್ನ ಸ್ವಂತ ಪ್ರೇರಣೆಯಿಂದ ಯಾವುದೇ ಸಮಯದಲ್ಲಿ, ತನ್ನ ಬಿಲ್ಲುಗಳಲ್ಲಿ ಮಾಡಿದ ಹೆಚ್ಚುವರಿ ಚಾರ್ಜುಗಳನ್ನು ಹಿಂತಿರುಗಿಸಬಹುದು.

**45. ಕಡಿಮೆ ವಿಧಿಸಲಾದ ಅಥವಾ ತಪ್ಪಾಗಿ ಮರುಸಂದಾಯ ಮಾಡಿದ ಚಾರ್ಜುಗಳ ಸಂದಾಯ ಕೋರಿ ನೋಟೀಸು.–** (1) ಈ ಅಧ್ಯಾಯದ ಅಡಿಯಲ್ಲಿ ವಿಧಿಸತಕ್ಕ ಯಾವುದೇ ಚಾರ್ಜನ್ನು ಕಡಿಮೆ ವಿಧಿಸಲಾಗಿದೆ ಅಥವಾ ತಪ್ಪಾಗಿ ಮರುಸಂದಾಯ ಮಾಡಲಾಗಿದೆ ಎಂದು ಮಂಡಳಿಯು ಮನಗಂಡರೆ ಅದು ಅಂಥ ಚಾರ್ಜ್ ನೀಡಿಕೆಗೆ ಹೊಣೆಯಾಗಿರುವ ವ್ಯಕ್ತಿಗೆ ಅಥವಾ ತಪ್ಪಾಗಿ ಮರುಸಂದಾಯ ಪಡೆದವರಿಗೆ, ನೋಟೀಸಿನಲ್ಲಿ ನಿರ್ದಿಷ್ಟ ಪಡಿಸಿದ ಮೊಬಲಗನ್ನು ಆತನು ಏಕೆ ಸಂದಾಯ ಮಾಡಕೂಡದು ಎಂಬುದಕ್ಕೆ ಕಾರಣವನ್ನು ತೋರಿಸಬೇಕೆಂದು ಅಗತ್ಯಪಡಿಸಿ ನೋಟೀಸು ಜಾರಿಮಾಡಬಹುದು:

ಪರಂತು, ಅಂಥ ನೋಟೀಸನ್ನು,–

(ಎ) ಚಾರ್ಜು ಕಡಿಮೆ ವಿಧಿಸಿರುವಾಗ, ಚಾರ್ಜಿನ ಸಂದಾಯದ ದಿನಾಂಕದಿಂದ ;

(ಬಿ) ಚಾರ್ಜನ್ನು ತಪ್ಪಾಗಿ ಮರು ಸಂದಾಯ ಮಾಡಿರುವಾಗ, ಮರು ಸಂದಾಯ ಮಾಡಿದ ದಿನಾಂಕದಿಂದ;

–ಮೂರು ವರ್ಷಗಳು ಮುಕ್ತಾಯವಾದ ತರುವಾಯ ನೀಡತಕ್ಕದ್ದಲ್ಲ.

(2) (1)ನೇ ಉಪ ಪ್ರಕರಣದ ಅಡಿಯಲ್ಲಿ ಯಾವ ವ್ಯಕ್ತಿಗೆ ನೋಟೀಸು ನೀಡಲಾಗಿದೆಯೋ ಆ ವ್ಯಕ್ತಿಯು ಮನವಿ ಸಲ್ಲಿಸಿದ್ದರೆ, ಮಂಡಳಿಯು ಅದನ್ನು ಪರಿಗಣಿಸಿದ ತರುವಾಯ, ಅಂಥ ವ್ಯಕ್ತಿಯಿಂದ ಬಾಕಿ ಇರುವ ಮೊಬಲಗನ್ನು ನಿರ್ಧರಿಸತಕ್ಕದ್ದು ಮತ್ತು ಆ ತರುವಾಯ ಅಂಥ ವ್ಯಕ್ತಿಯು ಹಾಗೆ ನಿರ್ಧರಿಸಲಾದ ಮೊಬಲಗನ್ನು ಸಂದಾಯ ಮಾಡತಕ್ಕದ್ದು.

**46. ಸರಕುಗಳ ಮೇಲೆ ದರಗಳ ಸಂದಾಯಕ್ಕಾಗಿ ಸಮಯ.–** ಬಂದರಿನಲ್ಲಿ ಇಳಿಸಲಾಗುವ ಸರಕುಗಳ ಸಂಬಂಧದಲ್ಲಿನ ದರಗಳನ್ನು ಸರಕುಗಳನ್ನು ಇಳಿಸಿದ ಕೂಡಲೇ ಸಂದಾಯ ಮಾಡತಕ್ಕದ್ದು ಮತ್ತು ಮಂಡಳಿಯ ಆವರಣಗಳಿಂದ ಹೊರಕಳುಹಿಸುವುದಕ್ಕೆ ಅಥವಾ ರಫ್ತಿಗಾಗಿ ನೌಕೆ ತುಂಬಿಸುವುದಕ್ಕೆ ಅಥವಾ ಒಂದು ನೌಕೆಯಿಂದ ಇನ್ನೊಂದಕ್ಕೆ ತುಂಬಿಸುವುದಕ್ಕೆ ಸಂಬಂಧಿಸಿದ ದರಗಳನ್ನು ಹಾಗೆ ಸರಕುಗಳನ್ನು ಹೊರಸಾಗಿಸುವುದಕ್ಕೆ, ನೌಕೆ ತುಂಬಿಸುವುದಕ್ಕೆ ಅಥವಾ ಸಾಗಿಸುವುದಕ್ಕೆ ಮೊದಲು ಸಂದಾಯ ಮಾಡತಕ್ಕದ್ದು.

**47. ದರಸಂದಾಯಕ್ಕಾಗಿ ಮಂಡಳಿಯ ಧಾರಣಾಧಿಕಾರ.–** (1) ಯಾವುದೇ ಸರಕುಗಳ ಸಂಬಂಧದಲ್ಲಿ ಈ ಅಧಿನಿಯಮದ ಅಡಿಯಲ್ಲಿ ಮಂಡಳಿಯು ವಿಧಿಸಬಹುದಾದ ಎಲ್ಲಾ ದರಗಳ ಮೊಬಲಗಿಗಾಗಿ ಮತ್ತು ಯಾವುದೇ ಸರಕುಗಳನ್ನು ಇಟ್ಟಿರಬಹುದಾದ ಯಾವುದೇ ಕಟ್ಟಡ, ಮೇಲುಪಾಯ, ಅಡಿಗಟ್ಟು ಪ್ರದೇಶ ಅಥವಾ ಇತರ ಆವರಣಗಳ ಸಂಬಂಧದಲ್ಲಿ ಮಂಡಳಿಗೆ ಬರಬೇಕಾದ ಬಾಡಿಗೆಗಾಗಿ ಮಂಡಳಿಯು ಅಂಥ ಸರಕುಗಳ ಮೇಲೆ ಧಾರಣಾಧಿಕಾರ ಹೊಂದಿರತಕ್ಕದ್ದು ಮತ್ತು ಅಂಥ ದರಗಳು ಅಥವಾ ಬಾಡಿಗೆಗಳು ಪೂರ್ಣವಾಗಿ ಸಂದಾಯವಾಗುವವರೆಗೆ ಅವುಗಳನ್ನು ಜಪ್ತಿಮಾಡಿ ತನ್ನ ವಶದಲ್ಲಿ ಇಟ್ಟುಕೊಳ್ಳಬಹುದು.

(2) ಇತರ ಚಾರ್ಜುಗಳಿಗಾಗಿ ಸದರಿ ಸರಕಿನ ಮೇಲೆ ಹಡಗು ಮಾಲೀಕನ ಧಾರಣಾಧಿಕಾರವಿದ್ದಲ್ಲಿ ಮತ್ತು ಆ ಧಾರಣಾಧಿಕಾರವನ್ನು 48ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ ಉಪಬಂಧಿಸಿರುವ ರೀತಿಯಲ್ಲಿ ರಕ್ಷಿಸಲಾಗಿದ್ದರೆ, ಆ ಧಾರಣಾಧಿಕಾರವನ್ನು ಹೊರತುಪಡಿಸಿ ಮತ್ತು ತತ್ಕಾಲದಲ್ಲಿ ಜಾರಿಯಲ್ಲಿರುವ ಕಾನೂನಿನ ಅಡಿಯಲ್ಲಿ ಕೇಂದ್ರ ಸರ್ಕಾರಕ್ಕೆ ಸಂದಾಯವಾಗತಕ್ಕ ಹಣಕ್ಕಾಗಿ ಮತ್ತು ಸರ್ಕಾರಕ್ಕೆ ಸಂದಾಯವಾಗತಕ್ಕ ಸೀಮಾ ಶುಲ್ಕಕ್ಕೆ ಸಂಬಂಧಪಟ್ಟ ದಂಡ ಅಥವಾ ಜುಲ್ಮಾನೆ ಸ್ವರೂಪದಲ್ಲದ ಹಣಕ್ಕಾಗಿ ಮತ್ತು ಸರ್ಕಾರಕ್ಕೆ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಡಿಯಲ್ಲಿ ಸಂದಾಯವಾಗತಕ್ಕ ಹಣಕ್ಕಾಗಿ ಧಾರಣಾಧಿಕಾರಗಳು ಇದ್ದರೆ ಅವನ್ನು ಹೊರತುಪಡಿಸಿ ಇತರೆ ಧಾರಣಾಧಿಕಾರಗಳು ಮತ್ತು ಕ್ಲೇಮುಗಳಿಗಿಂತಲೂ ಈ ಧಾರಣಾಧಿಕಾರಕ್ಕೆ ಆದ್ಯತೆ ಇರತಕ್ಕದ್ದು.

**48. ರವಾನೆ ಶುಲ್ಕ ಮತ್ತಿತರ ಚಾರ್ಜುಗಳಿಗಾಗಿ ಹಡಗು ಮಾಲೀಕನ ಧಾರಣಾಧಿಕಾರ.–** (1) ಯಾವುದೇ ನೌಕೆಯ ಮಾಸ್ಟರು ಅಥವಾ ಮಾಲೀಕ ಅಥವಾ ಅವರ ಏಜೆಂಟನು ಅಂಥ ನೌಕೆಗಳಿಂದ ಮಂಡಳಿಗೆ ಸೇರಿದ ಅಥವಾ ಅದರ ಸ್ವಾಧೀನದಲ್ಲಿರುವ ಯಾವುದೇ ಹಡಗುಕಟ್ಟೆ, ಸರಕುಕಟ್ಟೆ, ಬಂದರುಕಟ್ಟೆ, ಸ್ಟೇಜು, ಬಂದರುಕಾಪು, ಬರ್ತ್, ಸ್ಥಾಯಿಲಂಗರುಗಳು ಅಥವಾ ಹಡಗು ಇಳಿದಾಣಗಳಲ್ಲಿ ಸರಕುಗಳನ್ನು ಇಳಿಸುವಾಗ ಅಥವಾ ಇಳಿಸುವುದಕ್ಕೆ ಮುಂಚೆ ಮಂಡಳಿಗೆ ಲಿಖಿತದಲ್ಲಿ ನೋಟೀಸನ್ನು ನೀಡಿ ಅಂಥ ನೋಟೀಸಿನಲ್ಲಿ ನಮೂದಿಸಲಾದ ಹಣಕ್ಕೆ ಅಂಥ ಸರಕುಗಳು ನೌಕೆಯ ಮಾಲೀಕನಿಗೆ ರವಾನೆ ಶುಲ್ಕ ಅಥವಾ ಇತರ ಚಾರ್ಜುಗಳ ಸಂದಾಯಕ್ಕಾಗಿ ಧಾರಣಾಧಿಕಾರಕ್ಕೆ ಒಳಪಟ್ಟು ಇರತಕ್ಕದ್ದೆಂದು ತಿಳಿಸಿದರೆ, ಅಂಥ ಸರಕುಗಳು, ಅಂಥ ಮೊತ್ತಕ್ಕೆ ಅಂಥ ಧಾರಣಾಧಿಕಾರಕ್ಕೆ ಹೊಣೆಯಾಗಿ ಮುಂದುವರೆಯತಕ್ಕದ್ದು.

(2) ಸರಕುಗಳನ್ನು, ಇಲ್ಲಿ ಇನ್ನು ಮುಂದೆ ಹೇಳಿರುವಂತೆ ಅಂಥ ಧಾರಣಾಧಿಕಾರದಿಂದ ವಿಮುಕ್ತಿಗೊಳಿಸುವವರೆಗೆ ಆ ಸರಕುಗಳ ಮಾಲೀಕರ ಹೊಣೆಗಾರಿಕೆ ಮತ್ತು ವೆಚ್ಚದಲ್ಲಿ, ಮಂಡಳಿಯು ತನ್ನ ಅಭಿರಕ್ಷೆಯಲ್ಲಿ ಇಟ್ಟುಕೊಳ್ಳತಕ್ಕದ್ದು ಮತ್ತು ಅವುಗಳನ್ನು ಹಾಗೆ ಇಟ್ಟುಕೊಂಡ ಅವಧಿಗಾಗಿ ಉಗ್ರಾಣದ ಮತ್ತು ದಾಸ್ತಾನು ಬಾಡಿಗೆಯನ್ನು, ಅಂಥ ಸರಕುಗಳಿಗೆ ಹಕ್ಕುದಾರನಾದ ಪಕ್ಷಕಾರನು ಸಂದಾಯ ಮಾಡತಕ್ಕದ್ದು.

(3) ಯಾವ ವ್ಯಕ್ತಿಯಿಂದ ಅಥವಾ ಯಾವ ವ್ಯಕ್ತಿಯ ಪರವಾಗಿ, ನೋಟೀಸನ್ನು ನೀಡಲಾಗಿದೆಯೋ ಆ ವ್ಯಕ್ತಿಯು ಬರೆದುಕೊಟ್ಟ ಅಂಥ ಧಾರಣಾಧಿಕಾರದ ಮೊಬಲಗನ್ನು ಸ್ವೀಕರಿಸಿರುವುದಾಗಿ ಅಥವಾ ಧಾರಣಾಧಿಕಾರದಿಂದ ಬಿಡುಗಡೆ ಮಾಡಿಸುವುದಾಗಿ ತಾತ್ಪರ್ಯವಾಗುವ ಒಂದು ದಸ್ತಾವೇಜನ್ನು ಮಂಡಳಿಯು, ಈ ಬಗ್ಗೆ ನೇಮಕ ಮಾಡಿದ ಯಾವೊಬ್ಬ ಅಧಿಕಾರಿಯ ಮುಂದೆ ಹಾಜರುಪಡಿಸಿದಮೇಲೆ, ಮಂಡಳಿಯು ಅಂಥ ಧಾರಣಾಧಿಕಾರವನ್ನು ಪರಿಗಣಿಸದೆ ಅಂಥ ಸರಕುಗಳನ್ನು ಸ್ಥಳಾಂತರಿಸುವುದಕ್ಕೆ ಅನುಮತಿ ನೀಡಬಹುದು :

ಪರಂತು, ಮಂಡಳಿಯು ಅಂಥ ದಸ್ತಾವೇಜು ವಿಶ್ವಾಸಾರ್ಹತೆಯುಳ್ಳದ್ದೆಂಬ ಬಗ್ಗೆ ಸಮಂಜಸ ಜಾಗರೂಕತೆ ವಹಿಸಿರತಕ್ಕದ್ದು.

**49. ದರಗಳು ಅಥವಾ ಬಾಡಿಗೆಗಳನ್ನು ಸಂದಾಯ ಮಾಡದಿದ್ದಲ್ಲಿ ಅಥವಾ ರವಾನೆ ಶುಲ್ಕಕ್ಕಾಗಿ ಧಾರಣಾಧಿಕಾರವನ್ನು ಬಿಡುಗಡೆ ಮಾಡದಿದ್ದಲ್ಲಿ ಎರಡು ತಿಂಗಳ ತರುವಾಯ ಸರಕುಗಳನ್ನು ಮಾರಾಟ ಮಾಡುವುದು.–** (1) ಮಂಡಳಿಯು, ಯಾವುದೇ ಸರಕುಗಳು ತನ್ನ ಅಭಿರಕ್ಷೆಗೆ ಬಂದ ಸಮಯದಿಂದ ಎರಡು ತಿಂಗಳು ಮುಕ್ತಾಯಗೊಂಡ ತರುವಾಯ ಅಥವಾ ಪ್ರಾಣಿಗಳು ಮತ್ತು ಕೆಟ್ಟುಹೋಗುವ ಅಥವಾ ಅಪಾಯಕಾರಿ ಸರಕುಗಳ ವಿಷಯದಲ್ಲಿ, ಆ ಪ್ರಾಣಿಗಳು ಅಥವಾ ಸರಕುಗಳು ಇಳಿದ ತರುವಾಯ ಇಪ್ಪತ್ತನಾಲ್ಕು ಘಂಟೆಗಳಿಗಿಂತ ಕಡಿಮೆ ಇಲ್ಲದಂಥ, ಮಂಡಳಿಯು ಸೂಕ್ತವೆಂದು ಭಾವಿಸಿದ ಅಲ್ಪಾವಧಿಯು ಮುಕ್ತಾಯವಾದ ತರುವಾಯ,–

(ಎ) ಅಂಥ ಸರಕುಗಳಿಗೆ ಸಂಬಂಧಿಸಿದಂತೆ ಮಂಡಳಿಗೆ ಸಂದಾಯವಾಗಬೇಕಾದ ಯಾವುವೇ ದರಗಳು ಸಂದಾಯವಾಗಿರದಿದ್ದರೆ; ಅಥವಾ

(ಬಿ) ಅಂಥ ಸರಕುಗಳನ್ನು ದಾಸ್ತಾನು ಮಾಡಿಟ್ಟಿದ್ದ ಯಾವುದೇ ಸ್ಥಳಕ್ಕೆ ಸಂಬಂಧಿಸಿದಂತೆ ಮಂಡಳಿಗೆ ಸಂದಾಯವಾಗಬೇಕಾಗಿದ್ದ ಯಾವುದೇ ಬಾಡಿಗೆಯು ಸಂದಾಯವಾಗಿರದಿದ್ದರೆ; ಅಥವಾ

(ಸಿ) ನೋಟೀಸು ನೀಡಲಾಗಿರುವ ರವಾನೆ ಶುಲ್ಕ ಅಥವಾ ಇತರ ವೆಚ್ಚಗಳಿಗಾಗಿ ಯಾವುದೇ ಹಡಗಿನ ಮಾಲೀಕನ ಧಾರಣಾಧಿಕಾರವು ರದ್ದಾಗದಿದ್ದರೆ ಮತ್ತು ರವಾನೆಶುಲ್ಕ ಅಥವಾ ಇತರ ವೆಚ್ಚಗಳಿಗಾಗಿ ಧಾರಣಾಧಿಕಾರವನ್ನು ಕ್ಲೇಮು ಮಾಡುವ ವ್ಯಕ್ತಿಯು ಅಂಥ ಮಾರಾಟಕ್ಕಾಗಿ ಮಂಡಳಿಗೆ ಅರ್ಜಿಯನ್ನು ಸಲ್ಲಿಸಿದ್ದರೆ,

–ಅಂಥ ಸರಕುಗಳನ್ನು ಅಥವಾ ಮಂಡಳಿಯ ಅಭಿಪ್ರಾಯದಲ್ಲಿ ಅವಶ್ಯಕವೆನ್ನುವಷ್ಟನ್ನು ಮಾತ್ರ ಬಹಿರಂಗ ಹರಾಜಿನ ಮೂಲಕ ಅಥವಾ ಹಾಗೆ ಮಾಡುವುದು ಅಗತ್ಯವೆಂದು ಮಂಡಳಿಯು ಪರಿಗಣಿಸಿದಂಥ ಸಂದರ್ಭಗಳಲ್ಲಿ ಕಾರಣಗಳನ್ನು ಬರೆದು ದಾಖಲು ಮಾಡಿ ಟೆಂಡರು ಮೂಲಕ, ಖಾಸಗಿ ಒಪ್ಪಂದದ ಮೂಲಕ ಅಥವಾ ಇನ್ನಾವುದೇ ಇತರ ರೀತಿಯಲ್ಲಿ ಮಾರಾಟ ಮಾಡತಕ್ಕದ್ದು.

(2) ಅಂಥ ಮಾರಾಟವನ್ನು ಮಾಡುವುದಕ್ಕೆ ಮೊದಲು, ಅದರ ಬಗ್ಗೆ ಮಂಡಳಿಯು, ಸರ್ಕಾರಿ ರಾಜ್ಯಪತ್ರದಲ್ಲಿ ಮತ್ತು ಪ್ರಮುಖ ಸ್ಥಳೀಯ ದಿನಪತ್ರಿಕೆಗಳ ಪೈಕಿ ಕನಿಷ್ಠ ಒಂದರಲ್ಲಿ ನೋಟೀಸನ್ನು ಪ್ರಕಟಿಸುವ ಮೂಲಕ ಹತ್ತು ದಿನಗಳ ನೋಟೀಸನ್ನು ನೀಡತಕ್ಕದ್ದು :

ಪರಂತು, ಪ್ರಾಣಿಗಳು ಮತ್ತು ಕೆಟ್ಟು ಹೋಗುವ ಅಥವಾ ಅಪಾಯಕಾರಿ ಸರಕುಗಳ ಸಂದರ್ಭದಲ್ಲಿ, ಮಂಡಳಿಯು ತನ್ನ ಅಭಿಪ್ರಾಯದಲ್ಲಿ ಪ್ರಕರಣದ ತುರ್ತು ಸ್ವರೂಪಕ್ಕೆ ಯುಕ್ತವಾದಂಥ ಕಡಿಮೆ ಅವಧಿಯಲ್ಲಿ ಮತ್ತು ಅಂಥ ರೀತಿಯಲ್ಲಿ ನೋಟೀಸನ್ನು ನೀಡಬಹುದು.

(3) ಸರಕುಗಳ ಮಾಲೀಕನ ವಿಳಾಸವನ್ನು ಹಡಗಿನ ಸರಕುಪಟ್ಟಿಯಲ್ಲಿ ದಾಖಲುಮಾಡಿದ್ದರೆ ಅಥವಾ ಮಂಡಳಿಯ ಸ್ವಾಧೀನಕ್ಕೆ ಬಂದಿರುವ ಇತರ ಯಾವುದೇ ದಸ್ತಾವೇಜುಗಳಲ್ಲಿ ತಿಳಿಸಿದ್ದರೆ ಅಥವಾ ಅನ್ಯಥಾ ಗೊತ್ತಾಗಿದ್ದರೆ, ಅವನಿಗೂ ಸಹ, ಅಂಥ ವಿಳಾಸಕ್ಕೆ ಪತ್ರದ ಮೂಲಕ ಬಟವಾಡೆ ಮಾಡಿ ಅಥವಾ ಅಂಚೆ ಮೂಲಕ ನೋಟೀಸನ್ನು ಕಳಿಸತಕ್ಕದ್ದು. ಆದರೆ, ಅಂಥ ನೋಟೀಸನ್ನು ಕಳುಹಿಸದೆ ಹೋದ ಕಾರಣದಿಂದ ಅಂಥ ಸರಕುಗಳ ಪ್ರಾಮಾಣಿಕ ಖರೀದಿದಾರನ ಹಕ್ಕು ಅಸಿಂಧುವಾಗತಕ್ಕದ್ದಲ್ಲ ಅಥವಾ ಅಂಥ ಖರೀದಿದಾರನು ಅಂಥ ನೋಟೀಸನ್ನು ಕಳಿಸಲಾಗಿದೆಯೇ ಎಂಬುದನ್ನು ವಿಚಾರಿಸಲು ಬದ್ಧನಾಗತಕ್ಕದ್ದಲ್ಲ.

(4) ಈ ಪ್ರಕರಣದಲ್ಲಿ ಏನೇ ಇದ್ದರೂ, ನಿಯಂತ್ರಿತ ಸರಕುಗಳನ್ನು ಸರ್ಕಾರವು, ನಿರ್ದೇಶಿಸ ಬಹುದಾದಂಥ ಸಮಯದಲ್ಲಿ ಮತ್ತು ಅಂಥ ರೀತಿಯಲ್ಲಿ ಮಾರಾಟ ಮಾಡಬಹುದು.

**ವಿವರಣೆ:–** ಈ ಪ್ರಕರಣದಲ್ಲಿ ಮತ್ತು 50ನೇ ಪ್ರಕರಣದಲ್ಲಿ "ನಿಯಂತ್ರಿತ ಸರಕುಗಳು" ಎಂದರೆ, ಯಾವ ಸರಕುಗಳ ಬೆಲೆ ಮತ್ತು ವಿಲೇವಾರಿಯು ತತ್ಕಾಲದಲ್ಲಿ ಜಾರಿಯಲ್ಲಿರುವ ಕಾನೂನಿನ ಅಡಿಯಲ್ಲಿ ನಿಯಂತ್ರಣಗೊಂಡಿದೆಯೋ ಆ ಸರಕುಗಳು ಎಂದು ಅರ್ಥ.

**50. ಕಾಲಪರಿಮಿತಿಯೊಳಗೆ ಮಂಡಳಿಯ ಆವರಣದಿಂದ ಸಾಗಿಸದೆ ಇರುವ ಸರಕುಗಳ ವಿಲೇವಾರಿ.–**

(1) ಈ ಅಧಿನಿಯಮದಲ್ಲಿ ಏನೇ ಇದ್ದರೂ, ನೌಕೆಗಳಿಂದ ಇಳಿಸಿದ ಮೇಲೆ, ಮಂಡಳಿಯ ಅಭಿರಕ್ಷೆಯಲ್ಲಿಟ್ಟಿದ ಯಾವುವೇ ಸರಕುಗಳನ್ನು ಅವುಗಳ ಮಾಲೀಕನು ಅಥವಾ ಅವುಗಳಿಗೆ ಹಕ್ಕುಳ್ಳ ಇತರ ವ್ಯಕ್ತಿಯು, ಮಂಡಳಿಯ ಆವರಣದಿಂದ, ಅಂಥ ಸರಕುಗಳನ್ನು ಅದರ ಅಭಿರಕ್ಷೆಯಲ್ಲಿ ಇಟ್ಟ ದಿನಾಂಕದಿಂದ ಒಂದು ತಿಂಗಳೊಳಗಾಗಿ ಸಾಗಿಸದಿದ್ದಲ್ಲಿ, ಮಂಡಳಿಯು, ಅಂಥ ಮಾಲೀಕನ ಅಥವಾ ವ್ಯಕ್ತಿಯ ವಿಳಾಸವು ಗೊತ್ತಿದ್ದರೆ, ಅವನಿಗೆ ಅಂಥ ವಿಳಾಸಕ್ಕೆ ಪತ್ರದ ಬಟವಾಡೆ ಮಾಡಿ ಅಥವಾ ಅಂಚೆ ಮೂಲಕವಾಗಿ ನೋಟೀಸು ಜಾರಿಯಾಗುವಂತೆ ಮಾಡಬಹುದು ಅಥವಾ ಅವನಿಗೆ ನೋಟೀಸನ್ನು ಜಾರಿಮಾಡಲು ಸಾಧ್ಯವಿರದಿದ್ದರೆ ಅಥವಾ ಅವನ ವಿಳಾಸವು ಗೊತ್ತಿಲ್ಲದಿದ್ದರೆ, ಸರ್ಕಾರಿ ರಾಜ್ಯಪತ್ರದಲ್ಲಿ ಮತ್ತು ಹೆಚ್ಚಿಗೆ ಪ್ರಸಾರವುಳ್ಳ ಸ್ಥಳೀಯ ದಿನಪತ್ರಿಕೆಗಳ ಪೈಕಿ ಕನಿಷ್ಠ ಒಂದರಲ್ಲಿ ನೋಟೀಸು ಪ್ರಕಟವಾಗುವಂತೆ ಮಾಡಿ, ಅದರಲ್ಲಿ ಸರಕುಗಳನ್ನು ತಕ್ಷಣವೇ ಸಾಗಿಸುವಂತೆ ಅಗತ್ಯ ಪಡಿಸತಕ್ಕದ್ದು ಮತ್ತು ಅದಕ್ಕೆ ತಪ್ಪಿದಲ್ಲಿ ಸರಕುಗಳನ್ನು ಬಹಿರಂಗ ಹರಾಜಿನ ಮೂಲಕ ಅಥವಾ ಟೆಂಡರು ಅಥವಾ ಖಾಸಗಿ ಒಪ್ಪಂದದ ಮೂಲಕ ಅಥವಾ ಇತರ ಯಾವುದೇ ರೀತಿಯಲ್ಲಿ ಮಾರಾಟ ಮಾಡಲಾಗುವುದು ಎಂದು ತಿಳಿಸತಕ್ಕದ್ದು :

ಪರಂತು, ಅಂಥ ಸರಕುಗಳ ಸಂಬಂಧದಲ್ಲಿ ಈ ಅಧಿನಿಯಮದ ಅಡಿಯಲ್ಲಿ ಸಂದಾಯವಾಗಬೇಕಾಗಿದ್ದ ಎಲ್ಲಾ ದರಗಳು ಮತ್ತು ಚಾರ್ಜುಗಳು ಸಂದಾಯವಾಗಿದ್ದಲ್ಲಿ, ಅಂಥ ಸರಕುಗಳನ್ನು ಮಂಡಳಿಯ ಅಭಿರಕ್ಷೆಯಲ್ಲಿಟ್ಟ ದಿನಾಂಕದಿಂದ ಎರಡು ತಿಂಗಳು ಮುಕ್ತಾಯವಾಗವವರೆಗೆ ಹಾಗೆ ಸಾಗಿಸಬೇಕೆಂದು ಅಗತ್ಯಪಡಿಸಿ ಈ ಉಪ ಪ್ರಕರಣದ ಅಡಿಯಲ್ಲಿ ಯಾವುದೇ ನೋಟೀಸನ್ನು ಜಾರಿಗೊಳಿಸತಕ್ಕದ್ದಲ್ಲ ಅಥವಾ ಪ್ರಕಟಿಸತಕ್ಕದ್ದಲ್ಲ.

(2) (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ನೋಟೀಸನ್ನು ಅಂಥ ಸರಕುಗಳನ್ನು ಇಳಿಸಲಾದ ನೌಕೆಯ ಏಜೆಂಟನಿಗೂ ಸಹ ಜಾರಿಗೊಳಿಸಬಹುದು.

(3) ಅಂಥ ಮಾಲೀಕನು ಅಥವಾ ವ್ಯಕ್ತಿಯು, ತನಗೆ ಜಾರಿಮಾಡಲಾದ ಅಥವಾ (1)ನೇ ಉಪ ಪ್ರಕರಣದ ಅಡಿಯಲ್ಲಿ ಪ್ರಕಟಿಸಲಾದ ನೋಟೀಸಿನಲ್ಲಿನ ಕೋರಿಕೆಯನ್ನು ಪಾಲಿಸದಿದ್ದರೆ, ಮಂಡಳಿಯು, ಅಂಥ ಸರಕುಗಳನ್ನು ತನ್ನ ಅಭಿರಕ್ಷೆಯಲ್ಲಿಟ್ಟ ದಿನಾಂಕದಿಂದ ಎರಡು ತಿಂಗಳು ಮುಕ್ತಾಯವಾದ ತರುವಾಯ ಯಾವುದೇ ಸಮಯದಲ್ಲಿ ಬಹಿರಂಗ ಹರಾಜಿನ ಮೂಲಕ ಅಥವಾ ಅಂಥ ಪ್ರಕರಣಗಳಲ್ಲಿ ಹಾಗೆ ಮಾಡುವುದು ಅಗತ್ಯವೆಂದು ಮಂಡಳಿಯು ಪರಿಗಣಿಸಿದಲ್ಲಿ, ಕಾರಣಗಳನ್ನು ಬರೆದು ದಾಖಲುಮಾಡಿ ಟೆಂಡರು, ಖಾಸಗಿ ಒಪ್ಪಂದದ ಮೂಲಕ ಅಥವಾ ಬೇರೆ ಯಾವುದೇ ರೀತಿಯಲ್ಲಿ ಅಂಥ ಸರಕುಗಳನ್ನು ಅಥವಾ ಮಂಡಳಿಯ ಅಭಿಪ್ರಾಯದಲ್ಲಿ ಅದರಲ್ಲಿ ಅಗತ್ಯವಿರಬಹುದಾದಷ್ಟನ್ನು, 49ನೇ ಪ್ರಕರಣದ (2) ಮತ್ತು (3)ನೇ ಉಪಪ್ರಕರಣಗಳಲ್ಲಿ ನಿರ್ದಿಷ್ಟಪಡಿಸಿದ ರೀತಿಯಲ್ಲಿ ಮಾರಾಟದ ನೋಟೀಸನ್ನು ನೀಡಿದ ತರುವಾಯ ಮಾರಾಟಮಾಡಬಹುದು.

(4) (1)ನೇ ಉಪ ಪ್ರಕರಣ ಅಥವಾ (3)ನೇ ಉಪ ಪ್ರಕರಣದಲ್ಲಿ ಏನೇ ಇದ್ದರೂ,–

(ಎ) ಪ್ರಾಣಿಗಳು ಮತ್ತು ಕೆಟ್ಟುಹೋಗುವ ಅಥವಾ ಅಪಾಯಕಾರಿ ಸರಕುಗಳ ಸಂದರ್ಭದಲ್ಲಿ, ಒಂದು ತಿಂಗಳ ಅವಧಿಯು ಅಥವಾ ಸಂದರ್ಭಾನುಸಾರ (1)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಎರಡು ತಿಂಗಳ ಅವಧಿಯು ಮುಕ್ತಾಯವಾಗದಿದ್ದರೂ ಸಹ, ಅಂಥ ಸರಕುಗಳನ್ನು ಸಾಗಿಸಬೇಕೆಂದು ಮಂಡಳಿಯು ನೋಟೀಸು ನೀಡಬಹುದು ಅಥವಾ ಮಂಡಳಿಯ ಅಭಿಪ್ರಾಯದಲ್ಲಿ ಪ್ರಕರಣದ ತುರ್ತುಸ್ವರೂಪಕ್ಕೆ ಅವಸರಕ್ಕೆ ಅಗತ್ಯವಾದಂಥ ರೀತಿಯಲ್ಲಿ ಮತ್ತು ಅಂಥ ಕಡಿಮೆ ಅವಧಿಯ ಮಾರಾಟದ ನೋಟೀಸನ್ನು ನೀಡಬಹುದು.

(ಬಿ) ನಿಯಂತ್ರಿತ ಸರಕುಗಳನ್ನು 49ನೇ ಪ್ರಕರಣದ (4)ನೇ ಉಪಪ್ರಕರಣದ ಉಪಬಂಧಗಳಿಗೆ ಅನುಸಾರವಾಗಿ ಮಾರಾಟ ಮಾಡಬಹುದು.

(5) ಸರ್ಕಾರವು, ಸಾರ್ವಜನಿಕ ಹಿತಾಸಕ್ತಿಯಲ್ಲಿ ಹಾಗೆ ಮಾಡುವುದು ಅವಶ್ಯಕವೆಂದು ಪರಿಗಣಿಸಿದರೆ, ಅದು ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ, ಯಾವುದೇ ಸರಕುಗಳನ್ನು ಅಥವಾ ಸರಕುಗಳ ವರ್ಗಗಳನ್ನು ಈ ಪ್ರಕರಣದ ಪ್ರವರ್ತನೆಯಿಂದ ವಿನಾಯಿತಿಸಬಹುದು.

**51. ಮಾರಾಟದಿಂದ ಬಂದ ಉತ್ಪತ್ತಿಯ ವಿನಿಯೋಗ.–** (1) 49ನೇ ಪ್ರಕರಣ ಅಥವಾ 50ನೇ ಪ್ರಕರಣದ ಅಡಿಯಲ್ಲಿ ಮಾಡಿದ ಪ್ರತಿಯೊಂದು ಮಾರಾಟದಿಂದ ಬಂದ ಉತ್ಪತ್ತಿಯನ್ನು ಈ ಮುಂದಿನ ಕ್ರಮದಲ್ಲಿ ವಿನಿಯೋಗಿಸತಕ್ಕದ್ದು, ಎಂದರೆ :–

(ಎ) ಮಾರಾಟದ ವೆಚ್ಚವನ್ನು ಸಂದಾಯ ಮಾಡಲು ;

(ಬಿ) 47ನೇ ಪ್ರಕರಣದ (2)ನೇ ಉಪ ಪ್ರಕರಣದಲ್ಲಿ ಮಂಡಳಿಯ ಧಾರಣಾಧಿಕಾರಗಳ ಆದ್ಯತೆಯಿಂದ ಹೊರತುಪಡಿಸಲಾದ, ಧಾರಣಾಧಿಕಾರಗಳಿಗೆ ಮತ್ತು ಕ್ಲೇಮುಗಳಿಗೆ ಅವುಗಳ ಅನುಕ್ರಮ ಆದ್ಯತೆಗೆ ಅನುಸಾರವಾಗಿ ಸಂದಾಯ ಮಾಡಲು ;

(ಸಿ) ಸರಕು ಇಳಿಸುವ, ಸಾಗಿಸುವ, ದಾಸ್ತಾನು ಇಡುವ ಅಥವಾ ಉಗ್ರಾಣದಲ್ಲಿ ಇಟ್ಟುಕೊಳ್ಳುವ ದರಗಳ ಮತ್ತು ವೆಚ್ಚಗಳ ಸಂದಾಯ ಮತ್ತು ಅವುಗಳಿಗೆ ಸಂಬಂಧಿಸಿದಂತೆ ಮಂಡಳಿಗೆ ಸಲ್ಲಿಸಬೇಕಾದ ವಿಳಂಬ ಶುಲ್ಕ ಸೇರಿದಂತೆ (ದಂಡರೂಪದ ಡೆಮರೇಜ್ ಹೊರತು) ಅಂಥ ಸರಕುಗಳ ಸಂಬಂಧದಲ್ಲಿ ಅವುಗಳನ್ನು ಇಳಿಸಿದ ದಿನಾಂಕದಿಂದ ನಾಲ್ಕು ತಿಂಗಳ ಅವಧಿಗಾಗಿ ಸಂದಾಯವಾಗಬೇಕಾದ ಎಲ್ಲಾ ಚಾರ್ಜುಗಳನ್ನು ಸಂದಾಯ ಮಾಡಲು ;

(ಡಿ) ಸೀಮಾ ಶುಲ್ಕಕ್ಕೆ ಸಂಬಂಧಿಸಿದಂತೆ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಅಡಿಯಲ್ಲಿ ಕೇಂದ್ರ ಸರ್ಕಾರಕ್ಕೆ ಸಲ್ಲಿಸಬೇಕಾದ ಯಾವುದೇ ದಂಡ ಅಥವಾ ಜುಲ್ಮಾನೆಯನ್ನು ಸಂದಾಯ ಮಾಡಲು ;

(ಇ) ಮಂಡಳಿಗೆ ಬರಬೇಕಾದ ಯಾವುದೇ ಇತರ ಮೊಬಲಗನ್ನು ಸಂದಾಯಮಾಡಲು.

(2) ಹೆಚ್ಚುವರಿ ಹಣ ಏನಾದರೂ ಉಳಿದಲ್ಲಿ ಅದನ್ನು ಆ ಸರಕುಗಳ ಆಮದುದಾರನಿಗೆ, ಮಾಲೀಕನಿಗೆ ಅಥವಾ ಸರಕು ಪಡೆಯುವವನಿಗೆ ಅಥವಾ ಅವನ ಏಜೆಂಟನಿಗೆ, ಇದಕ್ಕಾಗಿ ಅವನಿಂದ ಸರಕುಗಳ ಮಾರಾಟದ ದಿನಾಂಕದಿಂದ ಆರು ತಿಂಗಳ ಒಳಗೆ ಅರ್ಜಿಸಲ್ಲಿಸಿದ ಮೇಲೆ ಆ ಸಂದಾಯ ಮಾಡತಕ್ಕದ್ದು.

(3) (2)ನೇ ಉಪಪ್ರಕರಣದ ಅಡಿಯಲ್ಲಿ ಯಾವುದೇ ಅರ್ಜಿಯನ್ನು ಸಲ್ಲಿಸದೇ ಹೋದಲ್ಲಿ, ಹೆಚ್ಚುವರಿ ಹಣವನ್ನು ಈ ಅಧಿನಿಯಮದ ಉದ್ದೇಶಗಳಿಗಾಗಿ ಮಂಡಳಿಯು ವಿನಿಯೋಗಿಸತಕ್ಕದ್ದು.

**52. ನೌಕೆಯನ್ನು ಜಪ್ತಿ ಮಾಡುವ ಮೂಲಕ ದರಗಳ ಮತ್ತು ಚಾರ್ಜುಗಳ ವಸೂಲಿ.–** (1) ಈ ಅಧಿನಿಯಮದ ಅಡಿಯಲ್ಲಿ ಅಥವಾ ಅದರ ಅನುಸರಣೆಯಲ್ಲಿ ಮಾಡಲಾದ ಯಾವುದೇ ವಿನಿಯಮದ ಅಥವಾ ಆದೇಶದ ಅಡಿಯಲ್ಲಿ, ಯಾವುದೇ ನೌಕೆಗೆ ಸಂಬಂಧಿಸಿದಂತೆ ಸಂದಾಯವಾಗಬೇಕಾದ ಯಾವುದೇ ದರಗಳು ಅಥವಾ ದಂಡಗಳನ್ನು ಅಥವಾ ಅವುಗಳ ಯಾವುದೇ ಭಾಗವನ್ನು ಕೇಳಿದ ತಕ್ಷಣವೇ ಸಂದಾಯಮಾಡಲು ಆ ನೌಕೆಯ ಮಾಸ್ಟರು ನಿರಾಕರಿಸಿದರೆ ಅಥವಾ ಉಪೇಕ್ಷಿಸಿದರೆ, ಮಂಡಳಿಯು ಅಂಥ ನೌಕೆಯನ್ನು ಮತ್ತು ಅದಕ್ಕೆ ಸೇರಿದ ಎತ್ತುಯಂತ್ರ, ಸಜ್ಜು ಸಲಕರಣೆಗಳನ್ನು ಮತ್ತು ಪೀಠೋಪಕರಣಗಳನ್ನು ಅಥವಾ ಅವುಗಳ ಯಾವುದೇ ಭಾಗವನ್ನು ಜಪ್ತಿ ಮಾಡಬಹುದು ಅಥವಾ ಹಿಡಿದಿಡಬಹುದು ಮತ್ತು ಮಂಡಳಿಗೆ ಬರಬೇಕಾದ ಮೊಬಲಗಿನೊಂದಿಗೆ ನೌಕೆಯ ಜಪ್ತಿ ಅಥವಾ ಹಿಡಿದಿಡುವಿಕೆಯಲ್ಲಿರುವ ಅವಧಿಗಾಗಿ ಸಂದಾಯ ಮಾಡಬೇಕಾಗಬಹುದಾದಂಥ ಹೆಚ್ಚಿನ ಮೊಬಲಗು ಸಂದಾಯವಾಗುವವರೆಗೆ ಅವುಗಳನ್ನು ತಡೆಹಿಡಿಯಬಹುದು.

(2) ಸದರಿ ದರಗಳ ಅಥವಾ ದಂಡಗಳ ಅಥವಾ ಜಪ್ತಿ ಅಥವಾ ಹಿಡಿದಿಡುವಿಕೆಯ ಅಥವಾ ಅವುಗಳನ್ನು ವಶದಲ್ಲಿಟ್ಟುಕೊಂಡಿರುವ ವೆಚ್ಚಗಳ ಯಾವುದೇ ಭಾಗವು, ಹಾಗೆ ಜಪ್ತಿಮಾಡಿದ ಅಥವಾ ಹಿಡಿದಿಟ್ಟ ದಿನದಿಂದ ಐದು ದಿನಗಳನ್ನೂ ಮೀರಿ ಸಂದಾಯವಾಗದೆ ಉಳಿದ ಸಂದರ್ಭದಲ್ಲಿ, ಮಂಡಳಿಯು ಹಾಗೆ ಜಪ್ತಿಮಾಡಿದ ಅಥವಾ ಹಿಡಿದಿಟ್ಟಿರುವ ನೌಕೆ ಅಥವಾ ಇತರ ವಸ್ತುಗಳನ್ನು ಮಾರಾಟ ಮಾಡಬಹುದು ಮತ್ತು ಅಂಥ ಮಾರಾಟದಿಂದ ಬಂದ ಉತ್ಪತ್ತಿಯಿಂದ ಅಂಥ ದರಗಳು ಅಥವಾ ದಂಡಗಳು ಮತ್ತು ಸಂದಾಯವಾಗದೇ ಉಳಿದ ಮಾರಾಟದ ವೆಚ್ಚವೂ ಒಳಗೊಂಡಂತೆ, ವೆಚ್ಚಗಳನ್ನು ತೀರಿಸತಕ್ಕದ್ದು ಮತ್ತು ಹೆಚ್ಚುವರಿ ಹಣವೇನಾದರೂ ಉಳಿದಿದ್ದರೆ ಅದನ್ನು ಅಂಥ ನೌಕೆಯ ಮಾಸ್ಟರನಿಗೆ, ಅವನು ಕೇಳಿದರೆ ಕೊಡತಕ್ಕದ್ದು.

**53. ದರಗಳ ಸಂದಾಯ, ಹಾನಿಪರಿಹಾರ, ಮುಂತಾದವುಗಳು ವಸೂಲಿ ಆದ ತರುವಾಯ ಬಂದರು ತೀರುವಳಿ ನೀಡುವುದು.–** ಬಂದರಿನ ಯಾವುದೇ ನೌಕೆಗೆ, ಬಂದರು ತೀರುವಳಿ ನೀಡುವ ಕರ್ತವ್ಯ ಹೊಂದಿರುವ ಕೇಂದ್ರ ಸರ್ಕಾರದ ಅಧಿಕಾರಿಗೆ ಮಂಡಳಿಯು ನೋಟೀಸನ್ನು ನೀಡಿ, ಅದರಲ್ಲಿ,–

(i) ಈ ಅಧಿನಿಯಮದ ಅಡಿಯಲ್ಲಿ ಅಥವಾ ಅದರ ಅನುಸರಣೆಯಲ್ಲಿ ರಚಿಸಿದ ಯಾವುದೇ ವಿನಿಯಮ ಅಥವಾ ಆದೇಶದ ಅಡಿಯಲ್ಲಿ ವಿಧಿಸಲಾದ ದರಗಳು, ಜುಲ್ಮಾನೆಗಳು, ದಂಡಗಳು ಅಥವಾ ವೆಚ್ಚಗಳ ಸಂಬಂಧದಲ್ಲಿ ನೋಟಿಸಿನಲ್ಲಿ ನಿರ್ದಿಷ್ಟ ಪಡಿಸಿದಂಥ ಮೊಬಲಗು ಅಂಥ ನೌಕೆಯ ಸಂಬಂಧವಾಗಿ ಅಥವಾ ಅಂಥ ನೌಕೆಯ ಮೇಲಿರುವ ಯಾವುದೇ ಸರಕುಗಳ ಸಂಬಂಧವಾಗಿ ಅಥವಾ ಅಂಥ ನೌಕೆಯ ಮಾಲೀಕನಿಂದ ಅಥವಾ ಮಾಸ್ಟರನಿಂದ ಮಂಡಳಿಗೆ ಬರಬೇಕಾಗಿದೆ ಎಂದು ; ಅಥವಾ

(ii) 100ನೇ ಪ್ರಕರಣದಲ್ಲಿ ಉಲ್ಲೇಖಿಸಲಾದ ಯಾವುದೇ ಹಾನಿಯ ಸಂಬಂಧದಲ್ಲಿ, ಅದರಲ್ಲಿ ನಿರ್ದಿಷ್ಟ ಪಡಿಸಿದ ಮೊಬಲಗು ಬರಬೇಕಾಗಿದೆ ಎಂದು ಮತ್ತು ಆ ಪ್ರಕರಣದ ಅಡಿಯಲ್ಲಿ ಮ್ಯಾಜಿಸ್ಟ್ರೇಟರ ಸಮ್ಮುಖದಲ್ಲಿ ಅವುಗಳ ವಸೂಲಿಗಾಗಿ ನಡೆಸಿದ ವ್ಯವಹರಣೆಗಳ ವೆಚ್ಚದ ಮೊಬಲಗಿನೊಂದಿಗೆ, ಅದು ವಸೂಲಿಯಾಗಿಲ್ಲವೆಂದು,

– ತಿಳಿಸಿದರೆ, ಅಂಥ ಅಧಿಕಾರಿಯು, ಸಂದರ್ಭಾನುಸಾರ ಹಾಗೆ ವಿಧಿಸಲಾಗುವ ಅಥವಾ ಬರಬೇಕಾದ ಮೊಬಲಗು ಸಂದಾಯವಾಗುವವರೆಗೆ ಅಥವಾ ಹಾನಿಪರಿಹಾರ ಅಥವಾ ವೆಚ್ಚಗಳು ವಸೂಲಿಯಾಗುವವರೆಗೆ ಅಂಥ ಬಂದರು ತೀರುವಳಿ ನೀಡತಕ್ಕದ್ದಲ್ಲ.

## ಅಧ್ಯಾಯ – VII

### ಸಾಲಪಡೆದುಕೊಳ್ಳಲು ಮಂಡಳಿಯ ಅಧಿಕಾರಗಳು

**54. ಸಾಲ ಪಡೆದುಕೊಳ್ಳಲು ಅಧಿಕಾರಗಳು.–** (1) ಒಂದು ಮಂಡಳಿಯು, ಸರ್ಕಾರದ ಪೂರ್ವ ಮಂಜೂರಾತಿಯೊಂದಿಗೆ, ಈ ಅಧಿನಿಯಮದ ಉದ್ದೇಶಗಳಿಗಾಗಿ ನಿಯಮಿಸಬಹುದಾದ ಅಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಸಾಲವನ್ನು ಪಡೆದುಕೊಳ್ಳಬಹುದು.

(2) ಮಂಡಳಿಯು ಭದ್ರತಾಪತ್ರಗಳನ್ನು ನೀಡಿ ಅದರ ಮೇಲೆ ಮುಕ್ತ ಮಾರುಕಟ್ಟೆಯಲ್ಲಿ ಸಾಲಗಳನ್ನು ಎತ್ತಬಹುದು ಅಥವಾ ಸರ್ಕಾರದಿಂದ ಅಥವಾ ಸರ್ಕಾರವು ಅನುಮೋದಿಸಿದ ಒಂದು ಬ್ಯಾಂಕ್‌ನಿಂದ ಸಾಲ ಪಡೆಯಬಹುದು.

**55. ಮಂಡಳಿಯ ಭದ್ರತಾ ಪತ್ರಗಳು.–** (1) ಮಂಡಳಿಯು, ಸರ್ಕಾರದ ಪೂರ್ವ ಮಂಜೂರಾತಿಯೊಂದಿಗೆ ಮಂಡಳಿಯ ಭದ್ರತಾಪತ್ರಗಳನ್ನು ಯಾವ ಸ್ವರೂಪದಲ್ಲಿ ನೀಡತಕ್ಕದ್ದು ಎಂಬುದನ್ನು ಮತ್ತು ಯಾವ ವಿಧಾನದಲ್ಲಿ ಮತ್ತು ಯಾವ ಷರತ್ತುಗಳಿಗೆ ಒಳಪಟ್ಟು ಅವುಗಳನ್ನು ವರ್ಗಾಯಿಸಬಹುದೆಂಬುದನ್ನು ನಿರ್ದಿಷ್ಟ ಪಡಿಸಬಹುದು.

(2) ಯಾವುದೇ ಸ್ವರೂಪದಲ್ಲಿರುವ ಮಂಡಳಿಯ ಯಾವುದೇ ಭದ್ರತಾ ಪತ್ರವನ್ನು ಹೊಂದಿರುವವನು, ಮಂಡಳಿಯು ಕಾಲಕಾಲಕ್ಕೆ ನಿರ್ಧರಿಸಬಹುದಾದಂಥ ನಿಬಂಧನೆಗಳ ಮೇಲೆ ಅವುಗಳ ವಿನಿಮಯದಲ್ಲಿ ಪಡೆಯಬಹುದು. ಮಂಡಳಿಯ ಭದ್ರತಾ ಪತ್ರವು ವಿನಿಯಮಗಳಲ್ಲಿ ನಿಯಮಿಸಲಾದ ಸ್ವರೂಪದಲ್ಲಿರತಕ್ಕದ್ದು.

(3) ಮಂಡಳಿ ಭದ್ರತಾಪತ್ರಗಳಿಂದ ಪಡೆದ ಹಣದ ಸಂಬಂಧದಲ್ಲಿನ ದಾವೆಹೂಡುವ ಹಕ್ಕನ್ನು, ದಿನಾಂಕದ ಆದ್ಯತೆಯ ಸಂಬಂಧದಲ್ಲಿ ಪ್ರಾಶಸ್ತ್ಯ ನೀಡದೆ ತತ್ಕಾಲದಲ್ಲಿ ಅದರ ಧಾರಕರಿಂದ ಚಲಾಯಿಸತಕ್ಕದ್ದು.

**56. ಭದ್ರತಾ ಪತ್ರಗಳ ಜಂಟಿ ಅಥವಾ ಪ್ರತ್ಯೇಕ ಸಂದಾಯ ಪಡೆಯುವವರ ಹಕ್ಕು.–** ಭಾರತೀಯ ಕರಾರು ಅಧಿನಿಯಮ, 1872ರ 45ನೇ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ,–

(ಎ) ಮಂಡಳಿಯ ಯಾವುದೇ ಭದ್ರತಾಪತ್ರವನ್ನು ಇಬ್ಬರು ಅಥವಾ ಹೆಚ್ಚಿನ ವ್ಯಕ್ತಿಗಳಿಗೆ ಜಂಟಿಯಾಗಿ ಸಂದಾಯಮಾಡಬಹುದಾಗಿದ್ದಾಗ ಅವರು ಅಥವಾ ಅವರಲ್ಲಿ ಯಾರಾದರೂ ಮರಣಹೊಂದಿದಲ್ಲಿ, ಮಂಡಳಿಯ ಭದ್ರತಾಪತ್ರವನ್ನು ಅಂಥ ವ್ಯಕ್ತಿಗಳ ವಾರಸುದಾರನಿಗೆ ಅಥವಾ ವಾರಸುದಾರರಿಗೆ ಸಂದಾಯಮಾಡತಕ್ಕದ್ದು ; ಮತ್ತು

(ಬಿ) ಮಂಡಳಿಯ ಯಾವುದೇ ಭದ್ರತಾಪತ್ರವನ್ನು ಇಬ್ಬರು ಅಥವಾ ಹೆಚ್ಚಿನ ವ್ಯಕ್ತಿಗಳಿಗೆ ಪ್ರತ್ಯೇಕವಾಗಿ ಸಂದಾಯಮಾಡಬಹುದಾಗಿದ್ದಾಗ, ಅವರು ಅಥವಾ ಅವರಲ್ಲಿ ಯಾರಾದರೂ ಮರಣಹೊಂದಿದ್ದಲ್ಲಿ, ಭದ್ರತಾ ಪತ್ರವನ್ನು ಅಂಥ ವ್ಯಕ್ತಿಗಳ ವಾರಸುದಾರನಿಗೆ ಅಥವಾ ವಾರಸುದಾರರಿಗೆ ಅಥವಾ ಮೃತನಾದ ವ್ಯಕ್ತಿಯ ಕಾನೂನು ಸಮ್ಮತ ಪ್ರತಿನಿಧಿಗೆ ಅಥವಾ ಅವರಲ್ಲಿ ಯಾರಿಗಾದರೂ ಸಂದಾಯ ಮಾಡತಕ್ಕದ್ದು.

**57. ಒಬ್ಬರು ಅಥವಾ ಇಬ್ಬರು ಅಥವಾ ಹೆಚ್ಚುಮಂದಿ ಜಂಟಿಧಾರಕರ ರಸೀದಿಕೊಡುವ ಅಧಿಕಾರಗಳು.–** ಮಂಡಳಿಯ ಯಾವುದೇ ಭದ್ರತಾ ಪತ್ರವನ್ನು ಇಬ್ಬರು ಅಥವಾ ಹೆಚ್ಚಿನ ವ್ಯಕ್ತಿಗಳು ಜಂಟಿಯಾಗಿ ಹೊಂದಿದ್ದರೆ, ಆ ವ್ಯಕ್ತಿಗಳಲ್ಲಿ, ಯಾರಾದರೂ ಒಬ್ಬರು, ಧಾರಕದಾರರಲ್ಲಿ ಬೇರೆ ಯಾರಾದರೂ ಅದಕ್ಕೆ ವಿರುದ್ಧವಾದ ನೋಟೀಸನ್ನು ಮಂಡಳಿಗೆ ನೀಡಿದ ಹೊರತು, ಅಂಥ ಭದ್ರತಾಪತ್ರಕ್ಕೆ ಸಂಬಂಧಪಟ್ಟಂತೆ ಸಂದಾಯ ಮಾಡಲಾಗುವ ಯಾವುದೇ ಬಡ್ಡಿಗೆ ಪರಿಣಾಮಕಾರಿ ರಸೀದಿಗಳನ್ನು ನೀಡಬಹುದು.

**58. ಭದ್ರತಾಪತ್ರಗಳ ಮೇಲೆಯೇ ಮಾಡಬೇಕಾದ ಹಿಂಬರಹ.–** ವರ್ಗಾವಣೀಯ ಲಿಖಿತ ಅಧಿನಿಯಮ, 1881ರ 15ನೇ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ ಹಿಂಬರಹದ ಮೂಲಕ ವರ್ಗಾಯಿಸಬಹುದಾದ ಮಂಡಳಿ ಭದ್ರತಾಪತ್ರದ ಯಾವ ಹಿಂಬರಹವೂ, ಭದ್ರತಾ ಪತ್ರದ ಹಿಂದೆಯೇ ಧಾರಕನ ಸಹಿ ಹಾಕಿ ಹಿಂಬರಹ ಮಾಡಿದ್ದ ಹೊರತು ಸಿಂಧುವಾಗತಕ್ಕದ್ದಲ್ಲ.

**59. ಭದ್ರತಾ ಪತ್ರದ ಹಿಂಬರಹವು ಆ ಮೊತ್ತಕ್ಕೆ ಹೊಣೆಯಾಗಿರತಕ್ಕದ್ದಲ್ಲ.–** (1) ವರ್ಗಾವಣೀಯ ಲಿಖಿತ ಅಧಿನಿಯಮ, 1881ರ 15ನೇ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ ಯಾವ ವ್ಯಕ್ತಿಯೂ ಮಂಡಳಿಯ ಯಾವುದೇ ಭದ್ರತಾ ಪತ್ರದ ಮೇಲೆ ತಾನು ಹಿಂಬರಹವನ್ನು ಮಾಡಿದ ಕಾರಣದಿಂದಲೇ ಅದರಡಿಯಲ್ಲಿ ಬಾಕಿಯಿರುವ ಅಸಲು ಅಥವಾ ಬಡ್ಡಿಯನ್ನು ಪಾವತಿಸಲು ಹೊಣೆಗಾರನಾಗತಕ್ಕದ್ದಲ್ಲ.

(2) ಮಂಡಳಿಯ ಪರವಾಗಿ, ಮಂಡಳಿಯ ಭದ್ರತಾ ಪತ್ರಗಳಿಗೆ ಸಹಿಮಾಡಲು ಅಧಿಕೃತಗೊಂಡ ವ್ಯಕ್ತಿಯು ತನ್ನ ಸಹಿಯನ್ನು ಮುದ್ರಿಸಬಹುದು, ಕೊರೆಯಚ್ಚು ಮಾಡಬಹುದು ಅಥವಾ ಕಲ್ಲಚ್ಚು ಮಾಡಬಹುದು ಅಥವಾ ಮಂಡಳಿಯು ನಿರ್ದೇಶಿಸಬಹುದಾದಂಥ ಇತರ ಯಾಂತ್ರಿಕ ಕ್ರಮದಿಂದ ಮುದ್ರಿಸಬಹುದು.

(3) ಹಾಗೆ ಮುದ್ರಿಸಲಾದ, ಕೊರೆಯಚ್ಚು, ಕಲ್ಲಚ್ಚು ಮಾಡಲಾದ ಅಥವಾ ಬೇರೆ ರೀತಿಯಲ್ಲಿ ಮುದ್ರಿಸಲಾದ ಒಂದು ಸಹಿಯು ಹಾಗೆ ಅಧಿಕೃತಗೊಂಡ ವ್ಯಕ್ತಿಯು ತನ್ನ ಸೂಕ್ತ ಕೈಬರಹದಲ್ಲಿ ಬರೆದಿದೆ ಎಂಬಂತೆ ಸಿಂಧುವಾಗಿರತಕ್ಕದ್ದು.

**60. ಭದ್ರತಾ ಪತ್ರದ ಡೂಪ್ಲಿಕೇಟ್ ಪ್ರತಿಯ ನೀಡಿಕೆ.–** (1) ಮಂಡಳಿಯ ಯಾವುದೇ ಭದ್ರತಾ ಪತ್ರವು ಕಳೆದು ಹೋಗಿದ್ದರೆ, ಕಳ್ಳತನವಾಗಿದ್ದರೆ ಅಥವಾ ಪೂರ್ಣವಾಗಿ ಅಥವಾ ಭಾಗಶಃ ನಾಶವಾಗಿದ್ದರೆ ಮತ್ತು ಹಾಗೆ ಕಳೆದು ಹೋಗದಿದ್ದರೆ, ಕಳ್ಳತನವಾಗದಿದ್ದರೆ ಅಥವಾ ನಾಶವಾಗದಿದ್ದರೆ ತನಗೆ ಅದರ ಹಣ ಸಂದಾಯವಾಗಬೇಕಾಗಿತ್ತು ಎಂದು ಕ್ಲೇಮು ಮಾಡುವ ವ್ಯಕ್ತಿಯು ಮಂಡಳಿಗೆ ಅರ್ಜಿಯನ್ನು ಸಲ್ಲಿಸುವ ಮೂಲಕ ಕಳೆದುಹೋದುದಕ್ಕೆ,

ಕಳ್ಳತನವಾದುದಕ್ಕೆ ಅಥವಾ ನಾಶ ಹೊಂದಿದ್ದಕ್ಕೆ ಸಮಾಧಾನವಾಗುವಷ್ಟು ಸಾಕ್ಷ್ಯಗಳನ್ನು ನೀಡಿ ಮತ್ತು ತನ್ನ ಕ್ಲೇಮು ನೈಜತೆಯಿಂದ ಕೂಡಿದ್ದಕ್ಕೆ ವಿನಿಯಮಗಳ ಮೂಲಕ ಉಪಬಂಧಿಸಬಹುದಾದಂಥ ಫೀಜು ಯಾವುದಾದರೂ ಇದ್ದರೆ, ಅದನ್ನು ಸಂದಾಯಮಾಡಿದ ಮೇಲೆ ಈ ಮುಂದಿನವುಗಳಿಗಾಗಿ ಮಂಡಳಿಯಿಂದ ಆದೇಶವನ್ನು ಪಡೆಯಬಹುದು,–

(ಎ) ಕಳೆದು ಹೋಗಿದೆ, ಕಳ್ಳತನವಾಗಿದೆ ಅಥವಾ ನಾಶವಾಗಿದೆ ಎಂದು ಹೇಳಲಾದ ಭದ್ರತಾ ಪತ್ರದ ಸಂಬಂಧದಲ್ಲಿ, ಭದ್ರತಾಪತ್ರದ ಒಂದು ಡೂಪ್ಲಿಕೇಟ್ ನೀಡುವವರೆಗೂ ಬಡ್ಡಿಯ ಸಂದಾಯ; ಮತ್ತು

(ಬಿ) ಅರ್ಜಿದಾರನಿಗೆ ಸಂದಾಯವಾಗಬೇಕಾದ ಒಂದು ಡೂಪ್ಲಿಕೇಟ್ ಭದ್ರತಾ ಪತ್ರದ ನೀಡಿಕೆ.

(2) ವಿನಿಯಮಗಳ ಮೂಲಕ ನಿರ್ದಿಷ್ಟಪಡಿಸಿರುವ ರೀತಿಯಲ್ಲಿ ನಷ್ಟ, ಕಳ್ಳತನ ಅಥವಾ ನಾಶದ ಬಗ್ಗೆ ಅಧಿಸೂಚನೆಯನ್ನು ಮಂಡಳಿಯು ನೀಡುವವರೆಗೆ (1)ನೇ ಉಪ ಪ್ರಕರಣದ ಅಡಿಯಲ್ಲಿ ಯಾವುದೇ ಆದೇಶವನ್ನು ಹೊರಡಿಸತಕ್ಕದ್ದಲ್ಲ.

(3) (1)ನೇ ಉಪ ಪ್ರಕರಣದ ಅಡಿಯಲ್ಲಿ ಹೊರಡಿಸಿದ ಆದೇಶಕ್ಕೆ ಸಂಬಂಧಿಸಿದ ಭದ್ರತೆಗಳ ಒಂದು ಪಟ್ಟಿಯನ್ನು ಮಂಡಳಿಯು ವಿನಿಯಮಗಳ ಮೂಲಕ ನಿರ್ದಿಷ್ಟಪಡಿಸಬಹುದಾಂಥ ರೀತಿಯಲ್ಲಿ ಪ್ರಕಟಿಸತಕ್ಕದ್ದು.

(4) ಸಂಪೂರ್ಣವಾಗಿ ಕಳೆದುಹೋಗಿದೆ, ಕಳ್ಳತನವಾಗಿದೆ ಅಥವಾ ನಾಶವಾಗಿದೆ ಎಂದು ಹೇಳಲಾದ ಯಾವುದೇ ಭದ್ರತಾ ಪತ್ರದ ಸಂಬಂಧದಲ್ಲಿ, ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಮಂಡಳಿಯು ಹೊಣೆಗಾರಿಕೆಯಿಂದ ವಿಮುಕ್ತಿ ಹೊಂದುವ ಮೊದಲು, ಯಾವುದೇ ಸಮಯದಲ್ಲಿ, ಅಂಥ ಭದ್ರತಾ ಪತ್ರವು ಸಿಕ್ಕರೆ, ಈ ಪ್ರಕರಣದ ಅಡಿಯಲ್ಲಿ, ಅದರ ಸಂಬಂಧದಲ್ಲಿ ಹೊರಡಿಸಿದ ಯಾವುದೇ ಆದೇಶವು ರದ್ದಾಗತಕ್ಕದ್ದು.

**61. ಪರಿವರ್ತಿತ ಮುಂತಾದ ಭದ್ರತಾ ಪತ್ರಗಳ ನೀಡಿಕೆ.–** (1) ಮಂಡಳಿಯು, ತಾನು ವಿನಿಯಮಗಳ ಮೂಲಕ ನಿರ್ದಿಷ್ಟ ಪಡಿಸಬಹುದಾದಂಥ ಷರತ್ತುಗಳಿಗೆ ಒಳಪಟ್ಟು, ಮಂಡಳಿಯು ನೀಡಿದ ಅದರ ಭದ್ರತಾ ಪತ್ರ ಅಥವಾ ಪತ್ರಗಳಿಗೆ ಹಕ್ಕುಳ್ಳವನಾಗಿರುವನೆಂದು ಕ್ಲೇಮುಮಾಡಿದ ಒಬ್ಬ ವ್ಯಕ್ತಿಯ ಅರ್ಜಿಯ ಮೇಲೆ ಕ್ಲೇಮಿನ ನೈಜತೆಯ ಬಗ್ಗೆ ತೃಪ್ತಿಹೊಂದಿದ ತರುವಾಯ ಮತ್ತು ವಿನಿಯಮದ ಮೂಲಕ ತಾನು ನಿರ್ದಿಷ್ಟ ಪಡಿಸಿದಂಥ ಯಾವುದಾದರೂ ರೀತಿಯಲ್ಲಿ ಸ್ವೀಕರಿಸಿದ್ದ ಭದ್ರತಾ ಪತ್ರ ಅಥವಾ ಭದ್ರತಾ ಪತ್ರಗಳನ್ನು ಒಪ್ಪಿಸಿದ ಮೇಲೆ ಮತ್ತು ಅಂಥ ಫೀಜಿನ ಸಂದಾಯದ ಮೇಲೆ ಭದ್ರತಾಪತ್ರವನ್ನು ಅಥವಾ ಭದ್ರತಾ ಪತ್ರಗಳನ್ನು ಪರಿವರ್ತಿಸಬಹುದು, ಒಟ್ಟುಗೂಡಿಸಬಹುದು ಅಥವಾ ಉಪ ವಿಭಾಗಿಸಬಹುದು ಮತ್ತು ತದನಂತರವಾಗಿ ಒಂದು ಹೊಸ ಭದ್ರತಾ ಪತ್ರ ಅಥವಾ ಭದ್ರತಾ ಪತ್ರಗಳನ್ನು ಅರ್ಜಿದಾರನಿಗೆ ನೀಡಬಹುದು.

(2) (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ಪರಿವರ್ತನೆ, ಒಟ್ಟು ಗೂಡಿಸುವುದು ಅಥವಾ ಉಪವಿಭಾಗಿಸುವುದು, ಒಂದೇ ವರ್ಗದ ಅಥವಾ ವಿವಿಧ ವರ್ಗಗಳ ಭದ್ರತಾ ಪತ್ರ ಅಥವಾ ಭದ್ರತಾಪತ್ರಗಳಿಗಾಗಿ ಅಥವಾ ಒಂದೇ ಅಥವಾ ವಿವಿಧ ಬಗೆಯ ಸಾಲಗಳಾಗಿ ಇರಬಹುದು.

**62. ಕೆಲವು ಪ್ರಕರಣಗಳಲ್ಲಿ ತೀರಿಕೆ.–** ಭಾರತೀಯ ಕಾಲಪರಿಮಿತಿ ಅಧಿನಿಯಮ, 1963ರಲ್ಲಿ ಏನೇ ಒಳಗೊಂಡಿದ್ದರೂ,–

(i) ಸಂದಾಯವು ನಿಗದಿಯಾದ ದಿನಾಂಕದಂದು ಅಥವಾ ದಿನಾಂಕದ ತರುವಾಯ, ಮಂಡಳಿ ಭದ್ರತಾ ಪತ್ರದ ಮೇಲೆ ಸಂದಾಯಮಾಡಬೇಕಾದ ಮೊಬಲಗನ್ನು ಸಂದಾಯ ಮಾಡಿದ ಮೇಲೆ,

(ii) 60ನೇ ಪ್ರಕರಣದ ಅಡಿಯಲ್ಲಿ ಒಂದು ಡೂಪ್ಲಿಕೇಟ್ ಭದ್ರತಾಪತ್ರವನ್ನು ನೀಡಿದಾಗ, ಅಥವಾ

(iii) 61ನೇ ಪ್ರಕರಣದ ಅಡಿಯಲ್ಲಿ, ಪರಿವರ್ತನೆ, ಒಟ್ಟುಗೂಡಿಸುವಿಕೆ ಅಥವಾ ಉಪ ವಿಭಾಗಿಸುವುದನ್ನು ಮಾಡಿದ ಮೇಲೆ ಒಂದು ಹೊಸ ಭದ್ರತಾ ಪತ್ರ ಅಥವಾ ಭದ್ರತಾಪತ್ರಗಳನ್ನು ನೀಡಲಾದಾಗ,–

(ಎ) ಸಂದಾಯ ಮಾಡಿದ ಪ್ರಕರಣದಲ್ಲಿ, ಸಂದಾಯವು ಬಾಕಿಯಾದ ದಿನಾಂಕದಿಂದ ಆರು ವರ್ಷಗಳು ಗತಿಸಿದ ತರುವಾಯ;

(ಬಿ) ಡೂಪ್ಲಿಕೇಟ್ ಭದ್ರತಾ ಪತ್ರದ ಪ್ರಕರಣದಲ್ಲಿ, 60ನೇ ಪ್ರಕರಣದ (3)ನೇ ಉಪಪ್ರಕರಣದ ಅಡಿಯಲ್ಲಿ ಅದರಲ್ಲಿ ಭದ್ರತಾ ಪತ್ರವನ್ನು ಮೊದಲು ನಮೂದಿಸಿದ ಪಟ್ಟಿಯು ಪ್ರಕಟಗೊಂಡ ದಿನಾಂಕದಿಂದ ಅಥವಾ ಮೂಲ ಭದ್ರತಾ ಮೇಲೆ ಬಡ್ಡಿಯ ಕೊನೆಯ ಸಂದಾಯ ದಿನಾಂಕದಿಂದ, ಇವುಗಳಲ್ಲಿ ಯಾವುದು ಅನಂತರವೋ ಆ ದಿನಾಂಕದಿಂದ ಆರು ವರ್ಷಗಳು ಗತಿಸಿದ ತರುವಾಯ;

(ಸಿ) ಪರಿವರ್ತನೆ, ಒಟ್ಟುಗೂಡಿಸುವಿಕೆ ಅಥವಾ ಉಪವಿಭಾಗ ಮಾಡುವುದರ ಮೇಲೆ ನೀಡಲಾದ ಒಂದು ಹೊಸಭದ್ರತಾ ಪತ್ರದ ಪ್ರಕರಣದಲ್ಲಿ ಅದನ್ನು ನೀಡಿದ ದಿನಾಂಕದಿಂದ ಆರು ವರ್ಷಗಳು ಗತಿಸಿದ ತರವಾಯ,

– ಹಾಗೆ ಸಂದಾಯ ಮಾಡಲಾದ ಭದ್ರತಾಪತ್ರ ಅಥವಾ ಭದ್ರತಾಪತ್ರಗಳ ಸಂಬಂಧದಲ್ಲಿ ಅಥವಾ ಯಾವುದರ ಬದಲಾಗಿ ಡೂಪ್ಲಿಕೇಟ್ ಪತ್ರ ನೀಡಲಾಗಿದೆಯೋ ಅಥವಾ ಹೊಸ ಭದ್ರತಾಪತ್ರ ಅಥವಾ ಪತ್ರಗಳನ್ನು ನೀಡಲಾಗಿದೆಯೋ ಆ ಭದ್ರತಾಪತ್ರಗಳ ಸಂಬಂಧದಲ್ಲಿ ಮಂಡಳಿಯು ಎಲ್ಲಾ ಹೊಣೆಗಾರಿಕೆಗಳಿಂದ ಮುಕ್ತವಾಗತಕ್ಕದ್ದು.

**63. ಮಂಡಳಿಯು ತೆಗೆದುಕೊಂಡ ಸಾಲಗಳಿಗಾಗಿ ಭದ್ರತಾಪತ್ರ.–** ಈ ಅಧಿನಿಯಮದ ಅಡಿಯಲ್ಲಿ ಮಂಡಳಿಯಿಂದ ಎತ್ತಲಾದ ಎಲ್ಲಾ ಸಾಲಗಳು, ಈ ಮುಂದಿನವುಗಳ ಮೇಲೆ ಮೊದಲು ಹೊಣೆಯಾಗತಕ್ಕದ್ದು, ಎಂದರೆ:–

(1) ಈ ಮುಂದಿನವುಗಳನ್ನು ಹೊರತುಪಡಿಸಿ, ಮಂಡಳಿಯಲ್ಲಿ ನಿಹಿತವಾಗಿರುವ ಸ್ವತ್ತು ಅಥವಾ ಇನ್ನು ಮುಂದೆ ಸಾಲಗಳು ಚಾಲ್ತಿಯಲ್ಲಿರುವಾಗ ನಿಹಿತಗೊಳ್ಳಬಹುದಾದ ಸ್ವತ್ತು,–

(i) ಮಂಡಳಿಯು ಪ್ರತ್ಯೇಕವಾಗಿರಿಸಿದ ಯಾವುದೇ ಮೊಬಲಗು,–

(ಎ) ಯಾವುದೇ ಸಾಲವನ್ನು ಸಂದಾಯಮಾಡುವ ಉದ್ದೇಶಕ್ಕಾಗಿ ಋಣತೀರಿಕೆ ನಿಧಿ ಎಂಬುದಾಗಿ ; ಅಥವಾ

(ಬಿ) ಅದರ ಉದ್ಯೋಗಿಗಳಿಗೆ ನಿವೃತ್ತಿ ವೇತನದ ಸಂದಾಯಕ್ಕಾಗಿ ; ಅಥವಾ

(ii) ಮಂಡಳಿಯು ಸ್ಥಾಪಿಸಿರುವ ಭವಿಷ್ಯನಿಧಿ ಅಥವಾ ನಿವೃತ್ತಿ ವೇತನ ನಿಧಿ.

(2) ಈ ಅಧಿನಿಯಮದ ಅಡಿಯಲ್ಲಿ ಮಂಡಳಿಯು ವಿಧಿಸುವ ದರಗಳು.

**64. ಮಂಡಳಿಗಾಗಿ ಮಾಡಿದ ಸಾಲಗಳ ಸಂಬಂಧದಲ್ಲಿ ಸರ್ಕಾರಕ್ಕೆ ಇರುವ ಪರಿಹಾರೋಪಾಯಗಳು.–** ಸರ್ಕಾರವು, ತಾನು ಮಂಡಳಿಗಾಗಿ ಮಾಡಿದ ಸಾಲಗಳ ಸಂಬಂಧದಲ್ಲಿ, ಮಂಡಳಿಯು ನೀಡಿದ ಭದ್ರತಾ ಪತ್ರಗಳ ಧಾರಕನಿಗಿರುವ ಪರಿಹಾರೋಪಾಯಗಳನ್ನೇ ಹೊಂದಿರತಕ್ಕದ್ದು ಮತ್ತು ಸರ್ಕಾರವು ಅಂಥ ಸಾಲಗಳ ಸಂಬಂಧದಲ್ಲಿ ಅಂಥ ಮಂಡಳಿಯ ಭದ್ರತಾ ಪತ್ರದ ಧಾರಕರಿಗಿಂತ ಯಾವುದೇ ಆದ್ಯತೆಯ ಅಥವಾ ಹೆಚ್ಚಿನ ಹಕ್ಕನ್ನು ಹೊಂದಿರುವುದಾಗಿ ಭಾವಿಸತಕ್ಕದ್ದಲ್ಲ:

ಪರಂತು, ಗೊತ್ತುಪಡಿಸಿದ ದಿನಾಂಕಕ್ಕೆ ಮೊದಲು ಮಾಡಿದ ಅಂಥ ಯಾವುದೇ ಸಾಲದ ನಿಬಂಧನೆಗಳು, ಮಂಡಳಿಯಿಂದ ಮರುಸಂದಾಯದ ವಿಷಯಗಳಲ್ಲಿ ಆ ಸಾಲವು ಇತರ ಎಲ್ಲಾ ಸಾಲಗಳ ಮೇಲೆ ಆದ್ಯತೆ ಹೊಂದಿರತಕ್ಕದ್ದೆಂದು ಸ್ಪಷ್ಟವಾಗಿ ಉಪಬಂಧಿಸಿದಂಥ ಸಾಲಗಳ ಆದ್ಯತೆ ಹೊಂದಿರತಕ್ಕದ್ದು.

**65. ನಿಗದಿತ ದಿನಾಂಕಕ್ಕೆ ಮೊದಲು ಸಾಲಗಳ ಮರುಸಂದಾಯಕ್ಕೆ ಮಂಡಳಿಯ ಅಧಿಕಾರ.–** ಮಂಡಳಿಯು, ಸರ್ಕಾರದ ಪೂರ್ವಮಂಜೂರಾತಿಯೊಂದಿಗೆ, ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ತನಗೆ ಬರಬಹುದಾದ ಹಣದಲ್ಲಿನ ಯಾವುದೇ ಮೊಬಲಗನ್ನು ಮತ್ತು ಮಂಡಳಿಯ ಭದ್ರತಾ ಪತ್ರಗಳನ್ನು ಹೊಂದಿರುವ ಇತರ ಧಾರಕರ ಭದ್ರತಾ ಪತ್ರಕ್ಕೆ ಪ್ರತಿಕೂಲವಾಗದಂತೆ ವಿನಿಯೋಗಿಸ ಬಹುದಾದಂಥ ಮೊಬಲಗನ್ನು ಸರ್ಕಾರಕ್ಕೆ ಮರು ಸಂದಾಯ ಮಾಡುವಲ್ಲಿ, ಯಾವುದೇ ಸಾಲದ ಅಸಲಿಗೆ ಸಂಬಂಧ ಪಟ್ಟಂತೆ ಯಾವುದೇ ಮೊಬಲಗು ಬಾಕಿ ಉಳಿದಿದ್ದರೆ, ಅದನ್ನು ಮರುಸಂದಾಯ ಮಾಡಲು ಗೊತ್ತುಪಡಿಸಿದ ಸಮಯವು ಬರದಿದ್ದರೂ ವಿನಿಯೋಗಿಸಬಹುದು:

ಪರಂತು, ಹತ್ತು ಸಾವಿರ ರೂಪಾಯಿಗಳಿಗಿಂತ ಕಡಿಮೆಯ ಯಾವುದೇ ಮೊತ್ತವನ್ನು ಮರುಸಂದಾಯ ಮಾಡತಕ್ಕದ್ದಲ್ಲ ಮತ್ತು ಅಂಥ ಮರು ಸಂದಾಯ ಮಾಡಿದಾಗ, ಅದರ ಮುಂದಿನ ಪ್ರತಿಯೊಂದು ಕಂತಿನ ಬಡ್ಡಿಯ ಮೊಬಲಗನ್ನು ಬಾಕಿ ಉಳಿದಿರುವ ಅಸಲಿನ ಮೇಲಿನ ಬಡ್ಡಿಗೆ ಸರಿಯಾಗಿರುವಂತೆ ಹೊಂದಾಣಿಕೆ ಮಾಡತಕ್ಕದ್ದು.

**66. ಋಣತೀರಿಕೆ ನಿಧಿಯ ಸ್ಥಾಪನೆ.–** (1) ಈ ಅಧಿನಿಯಮದ ಅಡಿಯಲ್ಲಿ ಮಂಡಳಿಯಿಂದ ಎತ್ತಲಾದ ಸಾಲಕ್ಕೆ ಸಂಬಂಧಪಟ್ಟಂತೆ, ಸಾಲದ ದಿನಾಂಕದಿಂದ ಒಂದು ವರ್ಷ ಮುಕ್ತಾಯಗೊಳ್ಳುವುದಕ್ಕೆ ಮೊದಲು ಮರು ಸಂದಾಯ ಮಾಡಬೇಕಾಗಿಲ್ಲದಿರುವಾಗ, ಸರ್ಕಾರವು ಲಿಖಿತದಲ್ಲಿ ಆದೇಶಿಸುವ ಮೂಲಕ ಹಾಗೆ ನಿರ್ದೇಶಿಸಿದರೆ, ಸರ್ಕಾರದ ಪೂರ್ವಾನುಮೋದನೆಯನ್ನು ಪಡೆದಹೊರತು, ಯಾವುದೇ ಸಂದರ್ಭದಲ್ಲಿ ಇಪ್ಪತ್ತೈದು ವರ್ಷಗಳನ್ನು ಮೀರದ ಅವಧಿಯೊಳಗೆ ಸಾಲವನ್ನು ತೀರಿಸಲು ಸಾಕಷ್ಟು ಮೊಬಲಗನ್ನು ಮಂಡಳಿಯು ತನ್ನ ಆದಾಯದಲ್ಲಿ ಅರ್ಧವಾರ್ಷಿಕವಾಗಿ ಋಣತೀರಿಕೆ ನಿಧಿಯಾಗಿ ಪ್ರತ್ಯೇಕವಾಗಿ ಇಡತಕ್ಕದ್ದು. ಆದರೆ, ಯಾವುದೇ ಸಂದರ್ಭದಲ್ಲಿ ಅವಧಿಯ ನಲವತ್ತು ವರ್ಷಗಳನ್ನು ಮೀರತಕ್ಕದ್ದಲ್ಲ:

ಪರಂತು, ಕೇಂದ್ರ ಸರ್ಕಾರ ಅಥವಾ ಯಾವುದೇ ಇತರ ರಾಜ್ಯ ಸರ್ಕಾರದಿಂದ ಮಂಡಳಿಯು ತೆಗೆದುಕೊಂಡ ಸಾಲಗಳ ಸಂದರ್ಭದಲ್ಲಿ, ಅದಕ್ಕಾಗಿ ಯಾವುದೇ ಷರತ್ತು ಇಲ್ಲದಿರುವಾಗ, ಋಣತೀರಿಕೆ ನಿಧಿಯನ್ನು ಸ್ಥಾಪಿಸುವ ಅಗತ್ಯವಿಲ್ಲ.

(2) ಯಾವುದೇ ಋಣತೀರಿಕೆ ನಿಧಿಯು, ಗೊತ್ತುಪಡಿಸಿದ ದಿನಕ್ಕೆ ಮೊದಲು, ಅದರಿಂದ ಎತ್ತಲಾದ ಸಾಲದ ಸಂಬಂಧದಲ್ಲಿ ಯಾವುದೇ ಪ್ರಾಧಿಕಾರದಿಂದ ಸ್ಥಾಪಿತವಾಗಿದ್ದರೆ, ಆ ಸಾಲಕ್ಕೆ, ಈ ಅಧಿನಿಯಮದ ಅಡಿಯಲ್ಲಿ ಮಂಡಳಿಯು ಹೊಣೆಯಾಗಿದ್ದರೆ, ಆ ಪ್ರಾಧಿಕಾರದಿಂದ ಹಾಗೆ ಸ್ಥಾಪಿಸಲಾದ ಋಣತೀರಿಕೆ ನಿಧಿಯು ಈ ಪ್ರಕರಣದ ಅಡಿಯಲ್ಲಿ ಮಂಡಳಿಯಿಂದ ಸ್ಥಾಪಿತವಾಗಿದ್ದು ಎಂದು ಭಾವಿಸ ತಕ್ಕದ್ದು.

**67. ಋಣತೀರಿಕೆ ನಿಧಿಯ ಹೂಡಿಕೆ ಮತ್ತು ವಿನಿಯೋಗ.–** (1) 66ನೇ ಪ್ರಕರಣದ (1)ನೇ ಉಪ ಪ್ರಕರಣದ ಅಡಿಯಲ್ಲಿ ಮಂಡಳಿಯಿಂದ ಹಾಗೆ ಪ್ರತ್ಯೇಕವಾಗಿಡಲಾದ ಮೊಬಲಗನ್ನು ಮತ್ತು ಆ ಪ್ರಕರಣದ (2)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ಯಾವುದೇ ಋಣತೀರಿಕೆ ನಿಧಿಯ ಒಂದು ಭಾಗವಾಗುವ ಮೊತ್ತವನ್ನು ಸಾರ್ವಜನಿಕ ಭದ್ರತಾಪತ್ರದಲ್ಲಿ ಅಥವಾ ಆ ಸಂಬಂಧದಲ್ಲಿ ಸರ್ಕಾರವು ಅನುಮೋದಿಸಬಹುದಾದ ಅಂಥ ಇತರೆ ಭದ್ರತಾಪತ್ರಗಳಲ್ಲಿ ಹೂಡತಕ್ಕದ್ದು ಮತ್ತು ಈ ಅಧಿನಿಯಮದ ಉದ್ದೇಶಗಳಿಗಾಗಿ ನ್ಯಾಸವಾಗಿ ಮಂಡಳಿಯು ಹೊಂದಿರತಕ್ಕದ್ದು.

(2) ಮಂಡಳಿಯು, ಋಣತೀರಿಕೆ ನಿಧಿಯಲ್ಲಿ, ಒಟ್ಟುಗೂಡಿಸಲಾದ ಮೊಬಲಗಿನ ಪೂರ್ಣ ಅಥವಾ ಯಾವುದೇ ಭಾಗದ ನಿಧಿಯನ್ನು ಯಾವುದರ ಮರು ಸಂದಾಯಕ್ಕಾಗಿ ಸ್ಥಾಪಿಸಲಾಗಿದೆಯೋ ಅದರ ತೀರಿಕೆಗಾಗಿ ಹಣವನ್ನು ವಿನಿಯೋಗಿಸಬಹುದು:

ಪರಂತು, ಅದು, ಹಾಗೆ ವಿನಿಯೋಗಿಸಿದ ಋಣತೀರಿಕೆ ನಿಧಿಯು ಅಥವಾ ಋಣತೀರಿಕೆ ನಿಧಿಯ ಒಂದು ಭಾಗವು ಗಳಿಸಬಹುದಾಗಿದ್ದ ಬಡ್ಡಿಗೆ ಸಮನಾದ ಮೊತ್ತವನ್ನು, ಸಾಲ ತೆಗೆದುಕೊಂಡ ಪೂರ್ಣಹಣವು ತೀರಿಕೆಯಾಗುವವರೆಗೆ ಪ್ರತಿ ವರ್ಷ ನಿಧಿಯಲ್ಲಿ ಸಂದಾಯಮಾಡುವುದು ಮತ್ತು ಸೇರಿಸಿಕೊಂಡು ಹೋಗುವುದು.

**68. ಋಣತೀರಿಕೆ ನಿಧಿಯ ಪರೀಕ್ಷೆ.–** (1) ಯಾವುದೇ ಸಾಲದ ಸಮಾಪನಕ್ಕಾಗಿ ಸ್ಥಾಪಿಸಲಾದ ಒಂದು ಋಣತೀರಿಕೆ ನಿಧಿಯು, ಈ ಸಂಬಂಧದಲ್ಲಿ, ಸರ್ಕಾರದಿಂದ ನೇಮಕಗೊಳ್ಳಬಹುದಾದ ಅಂಥ ವ್ಯಕ್ತಿಯಿಂದ ವಾರ್ಷಿಕ ಪರೀಕ್ಷೆಗೆ ಒಳಪಡತಕ್ಕದ್ದು ಮತ್ತು ಹಾಗೆ ನೇಮಕಗೊಂಡ ವ್ಯಕ್ತಿಯು, ನಿಧಿಯ ಜಮೆಯಲ್ಲಿರುವ ನಗದು ಮತ್ತು ಭದ್ರತಾಪತ್ರಗಳ ಪ್ರಸಕ್ತ ಮಾರುಕಟ್ಟೆ ಮೌಲ್ಯವು ಹೂಡಿಕೆಯನ್ನು ನಿಯತವಾಗಿ ಮಾಡಲಾಗಿದ್ದರೆ ಮತ್ತು ಮೂಲ ಅಂದಾಜಿನಂತೆ ಬಡ್ಡಿಯ ದರವನ್ನು ಅದರ ಮೇಲೆ ಪಡೆಯಲಾಗಿದ್ದರೆ, ಅವುಗಳನ್ನು ಸೇರಿಸಲಾದ ಮೊಬಲಗಿಗೆ ವಾಸ್ತವವಾಗಿ ಸಮಾನವಾಗಿವೆ ಎಂಬುದನ್ನು ಖಚಿತಪಡಿಸಿಕೊಳ್ಳತಕ್ಕದ್ದು.

(2) ಮಂಡಳಿಯು, ನಿಧಿಯ ವಾರ್ಷಿಕ ಪರಿಶೀಲನೆಯನ್ನು ನಡೆಸಲು (1)ನೇ ಉಪ ಪ್ರಕರಣದ ಅಡಿಯಲ್ಲಿ ನೇಮಕಗೊಂಡ ವ್ಯಕ್ತಿಯು, ಕೊರತೆಯುಂಟಾಗಿದೆ ಎಂದು ಪ್ರಮಾಣೀಕರಿಸಿದ ಯಾವುದೇ ಮೊಬಲಗನ್ನು ಕ್ರಮಕ್ರಮವಾಗಿ ಮರುಹೊಂದಾಣಿಕೆಗೆ ಸರ್ಕಾರವು ನಿರ್ದಿಷ್ಟವಾಗಿ ಮಂಜೂರಾತಿ ನೀಡಿದ್ದ ಹೊರತು ಋಣತೀರಿಕೆ ನಿಧಿಯಲ್ಲಿ ತಕ್ಷಣ ಸಂದಾಯಮಾಡತಕ್ಕದ್ದು.

(3) ಋಣತೀರಿಕೆ ನಿಧಿಯ ಜಮೆಯಲ್ಲಿರುವ ಭದ್ರತಾಪತ್ರಗಳ ನಗದು ಮತ್ತು ಪ್ರಸಕ್ತ ಮಾರುಕಟ್ಟೆ ಮೌಲ್ಯವು, ಮೊಬಲಗಿಗಿಂತ ಹೆಚ್ಚುವರಿಯಾಗಿದ್ದಲ್ಲಿ (1)ನೇ ಉಪ ಪ್ರಕರಣದ ಅಡಿಯಲ್ಲಿ ನೇಮಕಗೊಂಡ ವ್ಯಕ್ತಿಯು ಹೆಚ್ಚುವರಿಯಾದ ಮೊಬಲಗನ್ನು ಪ್ರಮಾಣೀಕರಿಸತಕ್ಕದ್ದು ಮತ್ತು ಮಂಡಳಿಯು, ಸರ್ಕಾರದ ಪೂರ್ವ ಮಂಜೂರಾತಿಯೊಂದಿಗೆ, 66ನೇ ಪ್ರಕರಣದ ಅಡಿಯಲ್ಲಿ ಅಗತ್ಯವಿರುವ ಋಣತೀರಿಕೆ ನಿಧಿಗೆ ಅರ್ಧ ವಾರ್ಷಿಕ ವಂತಿಕೆಗಳನ್ನು ಇಳಿಸಬಹುದು ಅಥವಾ ನಿಲ್ಲಿಸಬಹುದು.

**69. ಅಲ್ಪಾವಧಿ ಬಿಲ್ಲುಗಳ ಮೇಲೆ ಸಾಲವನ್ನು ಪಡೆಯಲು ಮಂಡಳಿಯ ಅಧಿಕಾರ.–** ಈ ಅಧಿನಿಯಮದಲ್ಲಿ ಏನೇ ಇದ್ದರೂ, ಸ್ಥಳೀಯ ಪ್ರಾಧಿಕಾರಗಳ ಸಾಲಗಳ ಅಧಿನಿಯಮ, 1914 ರಡಿಯಲ್ಲಿ (1914ರ ಕೇಂದ್ರ ಅಧಿನಿಯಮ 9) ಸಾಲವನ್ನು ಪಡೆಯಲು ಮಂಡಳಿಗೆ ಇರುವ ಅಧಿಕಾರಕ್ಕೆ ಬಾಧಿತವಾಗತಕ್ಕದ್ದಲ್ಲ.

**70. ತಾತ್ಕಾಲಿಕ ಸಾಲಗಳು ಅಥವಾ ಓವರ್‌ಡ್ರಾಫ್ಟ್‌ಗಳನ್ನು ತೆಗೆದುಕೊಳ್ಳಲು ಮಂಡಳಿಯ ಅಧಿಕಾರಗಳು.–** ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಮಂಡಳಿಯು,–

(i) ತನ್ನ ಭದ್ರತಾ ಪತ್ರಗಳನ್ನು ಮೀಸಲು ನಿಧಿಗಳಲ್ಲಿ ಇಡುವ ಮೂಲಕ ಅಥವಾ ಮಂಡಳಿಯು ತನ್ನ ಬ್ಯಾಂಕುಗಳ ನಿಶ್ಚಿತ ಠೇವಣಿಯ ಭದ್ರತೆಯ ಮೇಲೆ ತಾತ್ಕಾಲಿಕ ಓವರ್‌ಡ್ರಾಫ್ಟ್ ಮೂಲಕ ಅಥವಾ ಅನ್ಯಥಾ ಹಣವನ್ನು ಸಾಲವಾಗಿ ಪಡೆಯಬಹುದು.

(ii) ಸರ್ಕಾರದ ಪೂರ್ವಮಂಜೂರಾತಿ ಇಲ್ಲದೆ ತನ್ನ ಪ್ರಸಕ್ತ ಆಸ್ತಿಗಳನ್ನು ಒತ್ತೆ ಇಡುವುದರ ಮೇಲೆ ಅಥವಾ ಆಧಾರ ಮಾಡುವುದರ ಮೇಲೆ ಅಂಥ ಬ್ಯಾಂಕುಗಳಿಂದ ಮುಂಗಡವನ್ನು ಪಡೆಯಬಹುದು:

ಪರಂತು, ಅಂಥ ತಾತ್ಕಾಲಿಕ ಓವರ್‌ಡ್ರಾಫ್ಟ್ ಅಥವಾ ಇತರ ಸಾಲಗಳು,–

(ಎ) ಯಾವುದೇ ಸಮಯದಲ್ಲೂ ಆರು ತಿಂಗಳಿಗಿಂತ ಹೆಚ್ಚಿನ ಚಲಾವಣೆಯಲ್ಲಿರತಕ್ಕದ್ದಲ್ಲ ;

(ಬಿ) ಯಾವುದೇ ವರ್ಷದಲ್ಲಿ ಯಾವುದೇ ಸಮಯದಲ್ಲಿ ಅಂಥ ಓವರ್‌ಡ್ರಾಫ್ಟ್‌ಗಳ ಅಥವಾ ಇತರ ಸಾಲಗಳ ಮೊಬಲಗು ಐವತ್ತು ಲಕ್ಷ ರೂಪಾಯಿಗಳನ್ನು ಮೀರದಂತೆ, ಈ ಸಂಬಂಧದಲ್ಲಿ ಸರ್ಕಾರವು ನಿಗದಿಪಡಿಸಬಹುದಾದ ಮೊಬಲಗನ್ನು ಮೀರಿದರೆ, ಸರ್ಕಾರದ ಪೂರ್ವ ಮಂಜೂರಾತಿಯಿಲ್ಲದೇ ತೆಗೆದುಕೊಳ್ಳತಕ್ಕದ್ದಲ್ಲ:

ಮತ್ತು ಪರಂತು, ಓವರ್‌ಡ್ರಾಫ್ಟ್ ಅಥವಾ ಬೇರೆ ರೀತಿಯಲ್ಲಿ ಸಾಲಪಡೆಯಲಾದ ಎಲ್ಲಾ ಹಣವನ್ನು ಈ ಅಧಿನಿಯಮದ ಉದ್ದೇಶಗಳಿಗಾಗಿ ವೆಚ್ಚಮಾಡತಕ್ಕದ್ದು.

**71. ಪುನರ್‌ನಿರ್ಮಾಣ ಮತ್ತು ಅಭಿವೃದ್ಧಿಗಾಗಿ ಅಂತರರಾಷ್ಟ್ರೀಯ ಬ್ಯಾಂಕಿನಿಂದ ಅಥವಾ ಇತರ ವಿದೇಶಿ ಸಂಸ್ಥೆಗಳಿಂದ ಹಣವನ್ನು ಸಾಲ ಪಡೆಯಲು ಮಂಡಳಿಗೆ ಅಧಿಕಾರ.–** ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಆದರೆ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿಗೊಳಪಟ್ಟು, ಮಂಡಳಿಯು ಸರ್ಕಾರದ ಪೂರ್ವಮಂಜೂರಾತಿಯೊಂದಿಗೆ ಮತ್ತು ಸರ್ಕಾರವು ಅನುಮೋದಿಸಿದ ಯಾವುದೇ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ, ಈ ಅಧಿನಿಯಮದ ಉದ್ದೇಶಕ್ಕಾಗಿ, ಪುನರ್ ನಿರ್ಮಾಣಕ್ಕಾಗಿ ಮತ್ತು ಅಭಿವೃದ್ಧಿಗಾಗಿ ಯಾವುದೇ ಅಂತರರಾಷ್ಟ್ರೀಯ ಬ್ಯಾಂಕಿನಿಂದ ಅಥವಾ ಯಾವುದೇ ಬ್ಯಾಂಕಿನಿಂದ ಅಥವಾ ಭಾರತದ ಹೊರಗಿನ ಯಾವುದೇ ದೇಶದ ಸಂಸ್ಥೆಯಿಂದ ಯಾವುದೇ ಕರೆನ್ಸಿ ಅಥವಾ ಕರೆನ್ಸಿಗಳಲ್ಲಿ ಸಾಲವನ್ನು ಪಡೆಯಬಹುದು ಮತ್ತು ಈ ಅಧ್ಯಾಯದ ಯಾವ ಉಪಬಂಧವೂ ಅಥವಾ ಯಾವುದೇ ಅಂಥ ಸಾಲದ ಸಂಬಂಧದಲ್ಲಿ ಸಾಲದ ನಿಬಂಧನೆಗಳು ಮತ್ತು ಷರತ್ತುಗಳಿಗೆ ಅಥವಾ ಸರ್ಕಾರದಿಂದ ಅದರ ಅನುಮೋದನೆಯ ಬಗ್ಗೆ ಅನ್ಯಥಾ ಉಪಬಂಧಿಸಿದ ಹೊರತು ಅನ್ವಯವಾಗತಕ್ಕದ್ದಲ್ಲ.

## ಅಧ್ಯಾಯ – VIII

## ಆದಾಯ ಮತ್ತು ವೆಚ್ಚ

**72. ಮಂಡಳಿಯ ಸಾಮಾನ್ಯ ನಿಧಿ.–** ಮಂಡಳಿಯು, ಮಂಡಳಿಯ ಸಾಮಾನ್ಯ ನಿಧಿ ಎಂದು ಕರೆಯಲ್ಪಡುವ ತನ್ನದೇ ಒಂದು ನಿಧಿಯನ್ನು ಹೊಂದಿರುವುದು ಮತ್ತು ನಿರ್ವಹಿಸುವುದು ಮತ್ತು ಅದಕ್ಕೆ, ಸರ್ಕಾರದ ದ್ರವ್ಯ ಸಹಾಯಗಳಿಂದ, ಸಾಲಗಳಿಂದ ಮತ್ತು ಮುಂಗಡಗಳು ಒಳಗೊಂಡಂತೆ ಎಲ್ಲಾ

ಅನುದಾನಗಳು ಮತ್ತು ಅವುಗಳ ಸಂಪರ್ಕಗಳ ಮತ್ತು ಬಂದರುಗಳ ಸಂರಕ್ಷಕನಾಗಿ ಅಥವಾ ಭಾರತದ ಬಂದರುಗಳ ಅಧಿನಿಯಮ, 1908ರ 36ನೇ ಪ್ರಕರಣದಡಿಯಲ್ಲಿ ನೇಮಕಗೊಂಡ ನಿಕಾಯವಾಗಿ, ಸ್ವೀಕರಿಸಲಾದ ಎಲ್ಲಾ ಹಣವನ್ನು, ಜಮಾ ಮಾಡತಕ್ಕದ್ದು.

**73. ಸಾಮಾನ್ಯ ಲೆಕ್ಕ ಪತ್ರದಲ್ಲಿ ಹಣದ ವಿನಿಯೋಗ.–** (1) 72ನೇ ಪ್ರಕರಣದ ಅಡಿಯಲ್ಲಿ ಸಾಮಾನ್ಯ ಲೆಕ್ಕಕ್ಕೆ ಜಮಾ ಮಾಡಿದ ಹಣವನ್ನು ಈ ಮುಂದಿನ ಚಾರ್ಜುಗಳಿಗೆ ಸಂದಾಯ ಮಾಡಲು ಮಂಡಳಿಯು ವಿನಿಯೋಗಿಸತಕ್ಕದ್ದು, ಎಂದರೆ :–

(ಎ) ಮಂಡಳಿಯು ಪಡೆದಿರುವ ಅಥವಾ ಪಡೆಯಬಹುದಾದ ಸಾಲದ ಸಂಬಂಧದಲ್ಲಿ ಬಾಕಿ ಇರುವ ಅಸಲಿನ ಕಂತುಗಳಿಗಾಗಿ ಮತ್ತು ಬಡ್ಡಿಗಾಗಿ ಅಥವಾ ಅಂಥ ಸಾಲಕ್ಕಾಗಿ ಸ್ಥಾಪಿಸಲಾದ ಋಣ ತೀರಿಕೆಯ ನಿಧಿಗೆ ಮಂಡಳಿಯು ಹೊಣೆಯಾಗಿರುವಂಥ ಮರುಸಂದಾಯಕ್ಕಾಗಿ ಮತ್ತು ಸಂದಾಯಕ್ಕಾಗಿ ;

(ಬಿ) ಸಂಬಳ, ಶುಲ್ಕ, ಪರಿಶ್ರಮಧನ, ಭತ್ಯೆಗಳು, ನಿವೃತ್ತಿ ವೇತನಗಳು, ಉಪದಾನಗಳು, ಪರಿಹಾರ ಭತ್ಯೆಗಳು, ಅಥವಾ

(i) ಅಧ್ಯಕ್ಷರು, ಮತ್ತು ಮಂಡಳಿಯ ಇತರ ಸದಸ್ಯರಿಗೆ,

(ii) ಮಂಡಳಿಯ ನೌಕರರಿಗೆ, ಮತ್ತು

(iii) ಅಂಥ ನೌಕರರ ಜೀವಂತ ಉತ್ತರಾಧಿಕಾರಿಗಳು, ಯಾರಾದರೂ ಇದ್ದರೆ, ಅವರಿಗೆ

– ಬಾಕಿ ಇರುವ ಇತರೆ ಹಣಕ್ಕಾಗಿ ;

(ಸಿ) ಕೇಂದ್ರ ಸರ್ಕಾರ ಅಥವಾ ಯಾವುದೇ ರಾಜ್ಯ ಸರ್ಕಾರವು ಮಂಡಳಿಗೆ ನೀಡಿದ ಯಾವುದೇ ಅಧಿಕಾರಿಯ ನಿವೃತ್ತಿ ವೇತನ ಮತ್ತು ರಜಾ ಭತ್ಯೆಗಳಿಗಾಗಿ ಅಂಥ ಸರ್ಕಾರಕ್ಕೆ, ಯಾವುದಾದರೂ ಇದ್ದರೆ, ಅವುಗಳಿಗೆ ವಂತಿಕೆಗಾಗಿ ;

(ಡಿ) ಮಂಡಳಿಯು ಸ್ಥಾಪಿಸಿದ ಯಾವುದೇ ಭವಿಷ್ಯ ಅಥವಾ ಕಲ್ಯಾಣ ನಿಧಿ ಅಥವಾ ಸಾಲ ಅಥವಾ ವಿಶೇಷ ನಿಧಿಯ ನಿರ್ವಹಣೆ ಮತ್ತು ಆಡಳಿತಕ್ಕಾಗಿ ಮಂಡಳಿಯು ವಹಿಸಿದ್ದವುಗಳು ಯಾವುದಾದರೂ ಇದ್ದರೆ, ಅವುಗಳ ಮೌಲ್ಯ ಮತ್ತು ವೆಚ್ಚಗಳು ;

(ಇ) ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ವಿನಿಯಮಗಳಿಂದ ಕ್ರಮಬದ್ಧವಾಗಿ ಅಧಿಕೃತಗೊಳಿಸಿದಂಥ, (ಡಿ) ಖಂಡದಲ್ಲಿ ಉಲ್ಲೇಖಿಸಿದಂಥ ನಿಧಿಗಳು, ಯಾವುದಾದರು ಇದ್ದರೆ, ಅವುಗಳ ವಂತಿಕೆಗಾಗಿ ;

(ಎಫ್) ಮಂಡಳಿ ಮತ್ತು ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ಯಾವುದೇ ಇತರ ಪ್ರಾಧಿಕಾರದಿಂದ ಸಂದರ್ಭಾನುಸಾರ ಕಾಲಕಾಲಕ್ಕೆ, ಪೊಲೀಸ್‌ದಳ ಅಥವಾ ಕೇಂದ್ರ ಕೈಗಾರಿಕಾ ಭದ್ರತಾ ದಳ ಅಥವಾ ಸರ್ಕಾರದ ಅಥವಾ ಕೇಂದ್ರ ಸರ್ಕಾರದ ಅಥವಾ ಇತರ ಯಾವುದೇ ಪ್ರಾಧಿಕಾರದ ಇತರೆ ಯಾವುದೇ ದಳದ ಪಹರೆ ಮತ್ತು ರಕ್ಷಣೆಯ ಸಮಾರಂಭಗಳಿಗೆ ಸಂಬಂಧಿಸಿದ ವೆಚ್ಚಗಳು, ಸಂದರ್ಭಾನುಸಾರ, ಬಂದರು ಮತ್ತು ಹಡಗುಕಟ್ಟೆ, ಉಗ್ರಾಣಗಳ ಹಾಗೂ ಮಂಡಳಿಯ ಇತರೆ ಆಸ್ತಿಗಳ ರಕ್ಷಣೆಗಾಗಿ, ಸ್ಥಾಪಿಸಬಹುದು ಮತ್ತು ನಿರ್ವಹಿಸಬಹುದು;

(ಜಿ) ಮಂಡಳಿಯ ಸ್ವಾಧೀನದಲ್ಲಿರುವ ಅಥವಾ ಅದಕ್ಕೆ ಸಂಬಂಧಿಸಿದ ಆಸ್ತಿಯ ದುರಸ್ತಿ ಮತ್ತು ನಿರ್ವಹಣಾ ವೆಚ್ಚ ಹಾಗೂ ಅದರ ಮೇಲಿನ ಎಲ್ಲಾ ವೆಚ್ಚಗಳು ಮತ್ತು ಎಲ್ಲಾ ಕೆಲಸದ ಖರ್ಚುಗಳು ;

(ಹೆಚ್) ಯಾವುದೇ ಹೊಸ ಕೆಲಸದ ನಿರ್ವಹಣೆಯ ಮತ್ತು ಏರ್ಪಾಡಿನ ವೆಚ್ಚ ಅಥವಾ ಮಂಡಳಿಯ ಆದಾಯದ ಋಣಭಾರವಾಗಿ ನಿರ್ಧರಿಸಬಹುದಾದ 25ನೇ ಪ್ರಕರಣದಲ್ಲಿ ನಿರ್ದಿಷ್ಟ ಪಡಿಸಿದ ಪರಿಕರಗಳು ;

(ಐ) 26ನೇ ಪ್ರಕರಣದ ಅಡಿಯಲ್ಲಿ ಮಾಡಿದ ಯಾವುದೇ ವೆಚ್ಚಗಳು ;

(ಜೆ) ಈ ಅಧಿನಿಯಮದ ಸಾಮಾನ್ಯ ಉದ್ದೇಶಗಳಿಗಾಗಿ ಮಂಡಳಿಯು ಮಾಡಬಹುದಾದ ಇತರ ಯಾವುದೇ ವೆಚ್ಚಗಳು ;

(ಕೆ) ಮಂಡಳಿಯು ವಿನಿಯೋಗಿಸಬಹುದಾದ ಅಥವಾ ಅನ್ಯಥಾ ಸರ್ಕಾರವು ವಿಶೇಷವಾಗಿ ಮಂಜೂರು ಮಾಡಿರುವ ಅಥವಾ ಮಂಡಳಿಯು ಕಾನೂನು ರೀತ್ಯ ಹೊಣೆಯಾಗಿರುವ ಇತರೆ ಯಾವುದೇ ಚಾರ್ಜುಗಳು.

(2) (1)ನೇ ಉಪಪ್ರಕರಣದಲ್ಲಿ ನಿರ್ದಿಷ್ಟ ಪಡಿಸಿದ ಉದ್ದೇಶಗಳಿಗಾಗಿ ಅಥವಾ ರೀತಿಯಲ್ಲಿ ಮಂಡಳಿಯಿಂದ ತಕ್ಷಣ ಅನ್ವಯಿಸದೆ ಬಾಕಿ ನಿಂತಿರುವ ಸಾಲದ ಎಲ್ಲಾ ಹಣವನ್ನು,–

(ಎ) ಮಂಡಳಿಯು ತೀರ್ಮಾನಿಸಬಹುದಾದಂತೆ, ಬ್ಯಾಂಕಿಂಗ್ ಕಂಪೆನಿಗಳ (ಉದ್ಯಮಗಳ ಆರ್ಜನೆ ಮತ್ತು ವರ್ಗಾವಣೆ) ಅಧಿನಿಯಮ, 1970ರ 2ನೇ ಪ್ರಕರಣದ (ಡಿ) ಖಂಡದಲ್ಲಿ ಪರಿಭಾಷಿಸಲಾದಂಥ ಅಥವಾ ಯಾವುದೇ ರಾಷ್ಟ್ರೀಕೃತ ಬ್ಯಾಂಕು ಅಥವಾ ಭಾರತೀಯ ಸ್ಟೇಟ್ ಬ್ಯಾಂಕ್‌ನಲ್ಲಿ ಅಥವಾ ಸರ್ಕಾರವು ನಿಯಂತ್ರಿಸುತ್ತಿರುವ ಅಥವಾ ನಿರ್ವಹಿಸುತ್ತಿರುವ ಹಣಕಾಸು ಸಂಸ್ಥೆ ಅಥವಾ ಯಾವುದೇ ನಿಗಮದಲ್ಲಿ ಠೇವಣಿ ಇಡಬಹುದು; ಅಥವಾ

(ಬಿ) ಮಂಡಳಿಯು ತೀರ್ಮಾನಿಸಬಹುದಾದಂಥ ಸಾರ್ವಜನಿಕ ಭದ್ರತೆಗಳಲ್ಲಿ ತೊಡಗಿಸಬಹುದು ಮತ್ತು ಈ ಅಧಿನಿಯಮದ ಉದ್ದೇಶಗಳಿಗಾಗಿ ಅಂಥ ಭದ್ರತೆಯಲ್ಲಿ ಮಂಡಳಿಯು ವಿಶ್ವಾಸ ಹೊಂದಿರತಕ್ಕದ್ದು.

**74. ಸಾಮಾನ್ಯ (ಜನರಲ್) ಲೆಕ್ಕಖಾತೆಯಿಂದ ನಿರ್ದಿಷ್ಟ ನಿಗದಿತ ಲೆಕ್ಕಖಾತೆಗೆ ಮತ್ತು ನಿರ್ದಿಷ್ಟ ನಿಗದಿತ ಲೆಕ್ಕಖಾತೆಯಿಂದ ಸಾಮಾನ್ಯ ಲೆಕ್ಕಖಾತೆಗೆ ಹಣದ ವರ್ಗಾವಣೆಯ ಅಧಿಕಾರ.–** ಮಂಡಳಿಯು, ಸರ್ಕಾರದ ಪೂರ್ವಮಂಜೂರಾತಿಯೊಡನೆ, ಬಂದರಿನ ಸಾಮಾನ್ಯ ಲೆಕ್ಕಖಾತೆಗೆ ಜಮಾ ಮಾಡಿದ

ಹಣದಿಂದ, ಯಾವುದಾದರು ಕೊರತೆ ಇದ್ದರೆ, ಅದನ್ನು ನೀಗಿಸಲು ಪೈಲಟೈಜ್‌ದಂಥ ನಿರ್ದಿಷ್ಟ ಅಥವಾ ನಿಗದಿತ ಲೆಕ್ಕಖಾತೆಯಲ್ಲಿ, ಹಾಗೆ ನಿರ್ವಹಿಸಿದ ಅಥವಾ ಯಾವುದೇ ಹೆಚ್ಚುವರಿ ನಿಧಿಯ ಪೂರ್ಣ ಅಥವಾ ಭಾಗಶಃ ವರ್ಗಾವಣೆಯನ್ನು ಅಂಥ ನಿಗದಿತ ಲೆಕ್ಕಖಾತೆಯಿಂದ ಬಂದರಿನ ಸಾಮಾನ್ಯ (ಜನರಲ್) ಲೆಕ್ಕಖಾತೆಗೆ ಯಾವುದೇ ಮೊತ್ತವನ್ನು ವಿನಿಯೋಗಿಸಬಹುದು.

**75. ಕಾಯ್ದಿರಿಸಿದ ನಿಧಿಗಳ ಸ್ಥಾಪನೆ.–** ಮಂಡಳಿಯು, ಕಾಲಕಾಲಕ್ಕೆ, ತಾನು ಸೂಕ್ತವೆಂದು ಭಾವಿಸಬಹುದಾದಂತೆ ಹೆಚ್ಚುವರಿ ಆದಾಯದಿಂದ, ಕಾಯ್ದಿರಿಸಿದ ನಿಧಿ ಅಥವಾ ಈಗ ಇರುವ ಸವಲತ್ತುಗಳ ವಿಸ್ತರಣೆಯ ಉದ್ದೇಶದ ನಿಧಿಯಾಗಿ ಅಥವಾ ಬಂದರುಗಳಲ್ಲಿ ಹೊಸ ಸವಲತ್ತುಗಳನ್ನು ಸೃಜಿಸುವುದಕ್ಕಾಗಿ ಅಥವಾ ಯಾವುದೇ ತಾತ್ಕಾಲಿಕ ಆದಾಯ ಇಳಿತವನ್ನು ಭರಿಸುವುದಕ್ಕಾಗಿ ಅಥವಾ ಸಾರಿಗೆ ಉದ್ದೇಶದಿಂದ ಉಂಟಾದ ಹೆಚ್ಚುವರಿ ವೆಚ್ಚಕ್ಕಾಗಿ ಅಥವಾ ಬದಲಿ ಉದ್ದೇಶಕ್ಕಾಗಿ ಅಥವಾ ಬೆಂಕಿ, ಚಂಡಮಾರುತ, ಹಡಗು ಒಡೆದುಹೋಗುವುದು ಅಥವಾ ಇತರೆ ಯಾವುದೇ ಅಪಘಾತಗಳಿಂದಾಗಿ ಉಂಟಾದ ಹಾನಿ ಅಥವಾ ಅಪಾಯಗಳನ್ನು ಭರಿಸಲು ಅಥವಾ ಈ ಅಧಿನಿಯಮದ ಅಡಿಯಲ್ಲಿ ತನ್ನ ಸಾಮಾನ್ಯ ವ್ಯವಹರಣೆಗಳಿಂದಾಗಿ ಉದ್ಭವಿಸಿದ ಇತರೇ ತುರ್ತು ಕೆಲಸಗಳಿಗಾಗಿ, ಅಂಥ ಮೊತ್ತವನ್ನು ತೆಗೆದಿರಿಸಬಹುದು:

ಪರಂತು, ಈ ಸಂಬಂಧವಾಗಿ ತೆಗೆದಿರಿಸಿದ ವಾರ್ಷಿಕ ಮೊತ್ತ ಮತ್ತು ಯಾವುದೇ ಕಾಲದಲ್ಲಿಯ ಸರಾಸರಿ, ಯಾವುದೇ ಅಂಥ ಕಾಯ್ದಿರಿಸಿದ ನಿಧಿ ಅಥವಾ ಸಂದರ್ಭಾನುಸಾರ ಅಂಥ ಮೊತ್ತವನ್ನು ಮೀರತಕ್ಕದ್ದಲ್ಲದಂತೆ ಸರ್ಕಾರವು ಈ ಬಗ್ಗೆ ಕಾಲಕಾಲಕ್ಕೆ ನಿಗದಿಗೊಳಿಸತಕ್ಕದ್ದು.

**76. ಮಂಡಳಿಯ ಸ್ವಂತ ಬಂಡವಾಳ ಹೂಡಿಕೆಯ ಮೇಲೆ ಮಂಡಳಿಯ ಭದ್ರತೆಗಳನ್ನು ಕಾಯ್ದಿರಿಸುವ ಅಧಿಕಾರ.–** (1) ಈ ಅಧಿನಿಯಮದ ಅಡಿಯಲ್ಲಿ, ಬಂಡವಾಳ ಹೂಡಿಕೆಯ ಯಾವುವೇ ಉದ್ದೇಶಗಳಿಗಾಗಿ ಮಂಡಳಿಗೆ ಅಧಿಕಾರವನ್ನು ನೀಡಿದಾಗ, ಯಾವುದೇ ಸಾಲದ ಸಂಬಂಧದಲ್ಲಿ ಸರ್ಕಾರವು ಒಪ್ಪಿಗೆ ನೀಡಿದ ಅಂಥ ಭದ್ರತೆಗಳನ್ನು ಮಂಡಳಿಯು ಕಾಯ್ದಿರಿಸುವುದು ಮತ್ತು ಮೀಸಲಿಡುವುದು ಕಾನೂನು ಬದ್ಧವಾಗಿರತಕ್ಕದ್ದು:

ಪರಂತು, ಅಂಥ ಭದ್ರತೆಗಾಗಿ ಹಾಗೆ ಕಾಯ್ದಿರಿಸುವ ಮತ್ತು ಮೀಸಲಿಡುವ ಉದ್ದೇಶವನ್ನು, ಸಾಲವನ್ನು ನೀಡುವಾಗ ಷರತ್ತೆಂದು ಅಧಿಸೂಚಿಸತಕ್ಕದ್ದು.

(2) ಮಂಡಳಿಯ ಮೂಲಕ ನೇರವಾಗಿ ಮತ್ತು ಮಂಡಳಿಯ ಹೆಸರಿನಲ್ಲಿ ಅಂಥ ಭದ್ರತೆಗಳ ನೀಡಿಕೆಯನ್ನು ಅಂಥ ಭದ್ರತೆಗಳನ್ನು ಅಂತ್ಯಗೊಳಿಸುವುದಕ್ಕಾಗಿ ಅಥವಾ ರದ್ದುಪಡಿಸುವುದಕ್ಕಾಗಿ ಪ್ರವರ್ತಿಸತಕ್ಕದ್ದಲ್ಲ, ಆದರೆ ಹಾಗೆ ನೀಡಿದ ಪ್ರತಿಯೊಂದು ಭದ್ರತೆಯು ಯಾವೊಬ್ಬ ಇತರ ವ್ಯಕ್ತಿಗೆ ಮತ್ತು ಅವನ ಹೆಸರಿನಲ್ಲಿ ನೀಡಲಾಗಿದ್ದರೆ ಹೇಗೋ ಹಾಗೆ ಎಲ್ಲಾ ರೀತಿಯಲ್ಲೂ ಸಿಂಧುವಾಗಿರತಕ್ಕದ್ದು.

(3) ಮಂಡಳಿಯು ನೀಡಿದ ಯಾವುದೇ ಭದ್ರತೆಯನ್ನು ಮಂಡಳಿಯ ಮೂಲಕ ಖರೀದಿ ಅಥವಾ ಮಂಡಳಿಗೆ ವರ್ಗಾವಣೆ ವಹಿಸಿಕೊಡುವುದು ಅಥವಾ ಹಿಂಬರಹವು, ಅಂಥ ಯಾವುದೇ ಭದ್ರತೆಯನ್ನು ಅಂತ್ಯಗೊಳಿಸುವುದಕ್ಕಾಗಿ ಅಥವಾ ರದ್ದುಪಡಿಸುವುದಕ್ಕಾಗಿ ಪ್ರವರ್ತಿಸತಕ್ಕದ್ದಲ್ಲ, ಆದರೆ ಯಾವೊಬ್ಬ ಇತರೆ ವ್ಯಕ್ತಿಯಿಂದ ಹೊಂದಿದ್ದರೆ ಅಥವಾ ವರ್ಗಾಯಿಸಿದ್ದರೆ ಅಥವಾ ಹಂಚಿಕೆ ಅಥವಾ ಹಿಂಬರಹ ನೀಡಿದ್ದರೆ ಹೇಗೋ ಹಾಗೆ ಅದೇ ರೀತಿಯಲ್ಲಿ ಮತ್ತು ವ್ಯಾಪ್ತಿಯವರೆಗೆ ಅದು ಸಿಂಧುವಾಗಿರತಕ್ಕದ್ದು ಮತ್ತು ಅದೇ ರೀತಿಯಲ್ಲಿ ವರ್ಗಾವಣೀಯವಾಗಿರತಕ್ಕದ್ದು.

**77. ವೆಚ್ಚವನ್ನು ಬಂಡವಾಳದಲ್ಲಿ ಸರಿಹೊಂದಿಸಲು ಸರ್ಕಾರದಿಂದ ಪೂರ್ವ ಮಂಜೂರಾತಿ.–** (1) ಸರ್ಕಾರದಿಂದ ಪೂರ್ವ ಮಂಜೂರಾತಿಯಿಲ್ಲದೇ ಮಂಡಳಿಯಿಂದ ಯಾವುದೇ ವೆಚ್ಚವನ್ನು ಬಂಡವಾಳದಿಂದ ಸರಿದೂಗಿಸತಕ್ಕದ್ದಲ್ಲ:

ಪರಂತು, ಸರ್ಕಾರವು ವಿಧಿಸಬಹುದಾದ ಅಂಥ ಷರತ್ತುಗಳಿಗೆ ಒಳಪಟ್ಟು ಮತ್ತು ವೆಚ್ಚವು, ನಿರ್ದಿಷ್ಟ ಪಡಿಸಬಹುದಾದ ಅಂಥ ಪರಿಮಿತಿಯನ್ನು ಮೀರದಂತೆ, ಮಂಡಳಿಯು, ಅಂಥ ಮಂಜೂರಾತಿ ಇಲ್ಲದೆ ಬಂಡವಾಳದಲ್ಲಿ ಸರಿದೂಗಿಸಬಹುದು.

(2) (1)ನೇ ಉಪಪ್ರಕರಣದಲ್ಲಿ ಇರುವುದಾವುದೂ, ಯಾವುದೇ ಸಂದರ್ಭದಲ್ಲಿ ಬಂಡವಾಳದ ಚಾರ್ಜ್‌ಆಗಿ ವಹಿಸಿದ ವಾಸ್ತವ ವೆಚ್ಚವು, ಈ ಬಗ್ಗೆ ಸರ್ಕಾರವು ಮಂಜೂರುಮಾಡಿದ ವೆಚ್ಚವನ್ನು ಮೀರಿದ್ದರೆ, ಹಾಗೆ ಮಂಜೂರಾದ ವೆಚ್ಚವು ಶೇಕಡ ಹತ್ತನ್ನು ಮೀರದ ಹೊರತು ಸರ್ಕಾರದಿಂದ ಹೆಚ್ಚಿನ ಮಂಜೂರಾತಿಯನ್ನು ಅಗತ್ಯಪಡಿಸುತ್ತದೆ ಎಂದು ಭಾವಿಸತಕ್ಕದ್ದಲ್ಲ.

**78. ಮಂಡಳಿ ಅಥವಾ ಸರ್ಕಾರದ ಮಂಜೂರಾತಿಯ ಅವಶ್ಯವಿರುವ ಕಾಮಗಾರಿಗಳು.–** (1) ಹೊಸ ಕಾಮಗಾರಿ ಅಥವಾ ಪರಿಕರಗಳ ಅಂದಾಜು ಬೆಲೆಯು ಈ ಸಂಬಂಧವಾಗಿ ಸರ್ಕಾರವು ನಿಗದಿ ಪಡಿಸಬಹುದಾದಂಥ ಮೊಬಲಗಿಗಿಂತ ಹೆಚ್ಚಾಗಿದ್ದಲ್ಲಿ, ಅಂಥ ಕಾಮಗಾರಿಯನ್ನು ಅಥವಾ ಪರಿಕರಗಳನ್ನು ಮಂಡಳಿಯಿಂದ ಪ್ರಾರಂಭಿಸತಕ್ಕದ್ದಲ್ಲ ಅಥವಾ ಒದಗಿಸತಕ್ಕದ್ದಲ್ಲ. ಮಂಡಳಿಯಿಂದ ಅಂಥ ಹೊಸ ಕಾಮಗಾರಿ ಅಥವಾ ಪರಿಕರದ ಸಂಬಂಧದಲ್ಲಿ ಯಾವುದೇ ಕರಾರನ್ನು, ಅಂಥ ಕಾಮಗಾರಿ ಅಥವಾ ಪರಿಕರದ ಅಂದಾಜು ಯೋಜನೆಯನ್ನು ಒಪ್ಪಿಸಿದ್ದಲ್ಲಿ ಮತ್ತು ಮಂಡಳಿಯಿಂದ ಅನುಮೋದಿಸಿದ ಹೊರತು, ಮತ್ತು ಯಾವುದೇ ಸಂದರ್ಭದಲ್ಲಿ ಅಂಥ ಯಾವುದೇ ಹೊಸ ಕಾಮಗಾರಿ ಅಥವಾ ಪರಿಕರದ ಅಂದಾಜು ಬೆಲೆಯು ಅಂಥ ಮೊಬಲಗನ್ನು ಮೀರಿದರೆ, ಕಾಲಕಾಲಕ್ಕೆ ಸರ್ಕಾರದಿಂದ ಈ ಸಂಬಂಧವಾಗಿ ನಿಗದಿ ಪಡಿಸಬಹುದಾದಂತೆ, ಅಂಥ ಕಾಮಗಾರಿಯ ಪ್ರಾರಂಭಕ್ಕೆ ಮೊದಲು ಅಥವಾ ಪರಿಕರವನ್ನು ಒದಗಿಸುವ ಮೊದಲು ಅಥವಾ ಸರ್ಕಾರದಿಂದ ಯೋಜನೆ ಮತ್ತು ಅಂದಾಜಿನ ಮಂಜೂರಾತಿಯನ್ನು ಪಡೆಯತಕ್ಕದ್ದು.

(2) ಯಾವುದೇ ಸಂದರ್ಭದಲ್ಲಿ ಆದ ವಾಸ್ತವಿಕ ವೆಚ್ಚವು ಹಾಗೆ ಮಂಜೂರಾದ ಅಂದಾಜು ಬೆಲೆಗಿಂತ ಶೇಕಡ ಹತ್ತಕ್ಕಿಂತ ಹೆಚ್ಚಿನದನ್ನು ಮೀರದಿದ್ದಲ್ಲಿ, (1)ನೇ ಉಪಬಂಧದಲ್ಲಿರುವುದಾವುದೂ, ಸರ್ಕಾರದಿಂದ ಹೆಚ್ಚಿನ ಮಂಜೂರಾತಿಯನ್ನು ಅಗತ್ಯಪಡಿಸುವುದೆಂದು ಭಾವಿಸತಕ್ಕದ್ದಲ್ಲ.

**79. ಕಾಮಗಾರಿಗಳನ್ನು ನಿರ್ವಹಿಸಲು ಮುಖ್ಯ ಕಾರ್ಯನಿರ್ವಹಣಾಧಿಕಾರಿಯ ಅಧಿಕಾರ.–** 82ನೇ ಪ್ರಕರಣದಲ್ಲಿ ಏನೇ ಒಳಗೊಂಡಿದಾಗ್ಯೂ, ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿಯು, ಈ ಸಂಬಂಧದಲ್ಲಿ ಸರ್ಕಾರವು ನಿಗದಿ ಪಡಿಸಿದ ಗರಿಷ್ಠ ಪರಿಮಿತಿಯನ್ನು ಮೀರದಂಥ ಬೆಲೆಯ ಯಾವುದೇ

ಕಾಮಗಾರಿಯನ್ನು ನಿರ್ವಹಿಸಲು ನಿರ್ದೇಶಿಸಬಹುದು ಮತ್ತು ಅಂಥ ಕಾಮಗಾರಿಯನ್ನು ನಿರ್ವಹಿಸುವ ಕರಾರನ್ನು ಮಾಡಿಕೊಳ್ಳಬಹುದು, ಆದರೆ ಪ್ರತಿಯೊಂದು ಪ್ರಕರಣದಲ್ಲಿ ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿಯು, ಆದಷ್ಟು ಬೇಗನೆ, ಅವನಿಂದ ಮಾಡಿಕೊಂಡ ಕರಾರುಗಳ ಅಥವಾ ನೀಡಿದ ಅಂಥ ನಿರ್ದೇಶನಗಳನ್ನು ಮಂಡಳಿಗೆ ವರದಿ ಮಾಡತಕ್ಕದ್ದು.

**80. ಕ್ಲೇಮುಗಳನ್ನು ಬಗೆಹರಿಸಲು ಅಥವಾ ರಾಜಿ ಮಾಡಲು ಮಂಡಳಿಗೆ ಅಧಿಕಾರ.–** ಮಂಡಳಿಯು, ಯಾವುದೇ ಕ್ಲೇಮು ಅಥವಾ ಕೋರಿಕೆ ಅಥವಾ ಯಾವುದೇ ಕ್ರಮ ಅಥವಾ ಅಂಥ ಮೊತ್ತದ ಹಣಕ್ಕಾಗಿ ಅಥವಾ ವಿರುದ್ಧವಾಗಿ ಹೂಡಿದ ದಾವೆ ಅಥವಾ ಅದು ಸಾಕಷ್ಟು ಎಂದು ಭಾವಿಸಬಹುದಾದ ಇತರೆ ಪರಿಹಾರದ ಮೂಲಕ ಬಗೆಹರಿಸಬಹುದು ಅಥವಾ ರಾಜಿ ಮಾಡಬಹುದು:

ಪರಂತು, ಅಂಥ ಇತ್ಯರ್ಥವು ಈ ಸಂಬಂಧದಲ್ಲಿ ಸರ್ಕಾರವು ನಿರ್ದಿಷ್ಟ ಪಡಿಸಬಹುದಾದ ಅಂಥ ಮೊಬಲಗನ್ನು ಮೀರಿದ ಮೊತ್ತವನ್ನು ಮಂಡಳಿಗೆ ಸಂದಾಯ ಮಾಡುವುದು ಒಳಗೊಂಡಿದ್ದರೆ, ಸರ್ಕಾರದ ಪೂರ್ವ ಮಂಜೂರಾತಿಯಿಲ್ಲದೆ, ಈ ಪ್ರಕರಣದ ಅಡಿಯಲ್ಲಿ ಇತ್ಯರ್ಥವನ್ನು ಮಾಡತಕ್ಕದ್ದಲ್ಲ.

**81. ನಷ್ಟಗಳನ್ನು ಹೊಡೆದುಹಾಕುವುದು.–** (1) ಸರ್ಕಾರವು ನಿರ್ದಿಷ್ಟಪಡಿಸಬಹುದಾದಂಥ ಷರತ್ತುಗಳಿಗೆ ಒಳಪಟ್ಟು, ಮಂಡಳಿಗೆ ಬಾಕಿ ಇರುವ ಯಾವುದೇ ಮೊಬಲಗು ಅಥವಾ ವಹಿಸಿದ ನಷ್ಟವು, ಹಣವಾಗಿರಲಿ ಅಥವಾ ಸ್ವತ್ತಿನದ್ದಾಗಿರಲಿ, ವಸೂಲಿ ಮಾಡಲಾಗದ್ದೆಂದು ಮಂಡಳಿಯು ಅಭಿಪ್ರಾಯಪಟ್ಟಲ್ಲಿ, ಸದರಿ ಮೊಬಲಗು ಅಥವಾ ನಷ್ಟವನ್ನು ಹೊಡೆದುಹಾಕುವುದಕ್ಕೆ ಮಂಡಳಿಯು ಮಂಜೂರಾತಿ ನೀಡಬಹುದು.

(2) (1)ನೇ ಉಪಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಮಂಡಳಿಗೆ ಬಾಕಿ ಇರುವ ಯಾವುದೇ ಮೊತ್ತ ಅಥವಾ ಮಂಡಳಿಗೆ ಆದ ನಷ್ಟವು, ಅದು ನಗದಾಗಿರಲೀ ಅಥವಾ ಆಸ್ತಿಯಾಗಿರಲಿ, ವಸೂಲಿಯಾಗದ್ದೆಂದು ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿಯು ಅಭಿಪ್ರಾಯಪಟ್ಟಲ್ಲಿ, ಅಂಥ ಮೊತ್ತ ಅಥವಾ ನಷ್ಟವನ್ನು ಅಂತಿಮವಾಗಿ ಹೊಡೆದುಹಾಕುವುದಕ್ಕೆ ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿಯು ಮಂಜೂರಾತಿಯನ್ನು ನೀಡಬಹುದು:

ಪರಂತು, ಅಂಥ ಮೊತ್ತ ಅಥವಾ ನಷ್ಟವು ಯಾವುದೇ ಪ್ರತ್ಯೇಕ ಪ್ರಕರಣಗಳಲ್ಲಿ ಹತ್ತು ಸಾವಿರ ರೂಪಾಯಿಗಳಿಗೆ ಅಥವಾ ಯಾವುದೇ ಒಂದು ಆರ್ಥಿಕ ವರ್ಷದಲ್ಲಿ ಸರಾಸರಿ ಒಂದು ಲಕ್ಷ ರೂಪಾಯಿಗಳಿಗೆ ಮೀರದಂತೆ ಇದ್ದಾಗ, ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿಯು ಅಂಥ ಮಂಜೂರಾತಿಗೆ ಕಾರಣಗಳನ್ನು ನೀಡಿ ಮಂಡಳಿಗೆ ಒಂದು ವರದಿಯನ್ನು ನೀಡತಕ್ಕದ್ದು.

**82. ಸಂರಕ್ಷಣಾ ಅಧಿಕಾರಿಯಾಗಿ ಮಂಡಳಿಯ ಅಧಿಕಾರ ಮುಂತಾದವುಗಳು.–** ಈ ಅಧಿನಿಯಮದಿಂದ ಪ್ರಾಧೀಕೃತಗೊಳಿಸಲಾದ ಕಾಮಗಾರಿಯ ಸಂಬಂಧದಲ್ಲಿ, ಈ ಅಧಿನಿಯಮದಲ್ಲಿ ಒಳಗೊಂಡ ಎಲ್ಲಾ ಅಧಿಕಾರಗಳು, ಪ್ರಾಧಿಕಾರಗಳು ಮತ್ತು ನಿರ್ಬಂಧಗಳು, ಬಂದರು ಸಂರಕ್ಷಣಾ ಅಧಿಕಾರಿಯಾಗಿ ಮಂಡಳಿಯ ಅಥವಾ ಭಾರತ ಬಂದರುಗಳ ಅಧಿನಿಯಮ, 1908ರ 36ನೇ ಪ್ರಕರಣದ (1)ನೇ ಉಪಪ್ರಕರಣದ ಅಡಿಯಲ್ಲಿ ನೇಮಿಸಲಾದ ಒಂದು ನಿಕಾಯವು ನಿರ್ವಹಿಸಬಹುದಾದ ಕಾಮಗಾರಿಗಳಿಗೆ ಮತ್ತು ಅಂಥ ಕಾಮಗಾರಿಗಳ ಮಂಜೂರಾತಿ, ಅದರ ಅಂದಾಜು ಮತ್ತು ಅದರ ಅಡಿಯ ವೆಚ್ಚಗಳಿಗೂ ಅನ್ವಯಿಸತಕ್ಕದ್ದು.

**83. ಆಯವ್ಯಯ ಅಂದಾಜುಗಳು.–** (1) ಮಂಡಳಿಯು, ಪ್ರತಿವರ್ಷ ಜನವರಿ ಮೂವತ್ತೊಂದನೇ ದಿನಾಂಕದಂದು ಅಥವಾ ಆ ದಿನಾಂಕದ ಒಳಗೆ, ಮಂಡಳಿಯ ಮುಂದಿನ ಹಣಕಾಸಿನ ವರ್ಷದ ಆದಾಯ ಮತ್ತು ವೆಚ್ಚಗಳ ಅಂದಾಜನ್ನು ಸರ್ಕಾರವು ನಿಯಮಿಸಬಹುದಾದ ನಮೂನೆಯಲ್ಲಿ ಮಂಡಿಸುವಂತೆ ಮಾಡುವುದಕ್ಕಾಗಿ, ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿಯು ಒಂದು ವಿಶೇಷ ಸಭೆಯನ್ನು ನಡೆಸತಕ್ಕದ್ದು.

(2) ಅಂಥ ಅಂದಾಜುಗಳ ಪ್ರತಿಯನ್ನು ಮಂಡಳಿಯ ಪ್ರತಿಯೊಬ್ಬ ಸದಸ್ಯರಿಗೆ, (1)ನೇ ಉಪ ಪ್ರಕರಣದಲ್ಲಿ ಉಲ್ಲೇಖಿಸಿದಂಥ ವಿಶೇಷ ಸಭೆಗೆ ಗೊತ್ತುಪಡಿಸಿದ ದಿನಾಂಕಕ್ಕಿಂತ ಕನಿಷ್ಠ ಹತ್ತು ಪೂರ್ಣದಿನಗಳು ಮುಂಚಿತವಾಗಿ ಆತನಿಗೆ ತಲುಪುವಂತೆ, ಅಂಚೆಯ ಮೂಲಕವಾಗಿಯಾಗಲಿ ಅಥವಾ ಇತರ ರೀತಿಯಲ್ಲಿ ಕಳುಹಿಸಿಕೊಡತಕ್ಕದ್ದು.

(3) ಮಂಡಳಿಯು ಅಂದಾಜನ್ನು ಅಂಥ ಸಭೆಯಲ್ಲಿ ಪರಿಗಣಿಸತಕ್ಕದ್ದು ಮತ್ತು ಅದನ್ನು ಮಾರ್ಪಾಟು ಮಾಡದೆ ಅಥವಾ ಮಾರ್ಪಡಿಸಿ ತಾತ್ಕಾಲಿಕ ಅನುಮೋದನೆಯನ್ನು ನೀಡಬಹುದು.

(4) ಮಂಡಳಿಯು, ಫೆಬ್ರವರಿ ಹತ್ತನೇ ದಿನದಂದು ಅಥವಾ ಅದಕ್ಕೆ ಮೊದಲು, ತಾನು ತಾತ್ಕಾಲಿಕ ಅನುಮೋದನೆ ನೀಡಿದ ಅಂಥ ಅಂದಾಜಿನ ಪ್ರತಿಯನ್ನು ಸರ್ಕಾರಕ್ಕೆ ಒಪ್ಪಿಸತಕ್ಕದ್ದು.

(5) ಸರ್ಕಾರವು ಅಂದಾಜನ್ನು ಮಂಜೂರು ಮಾಡಬಹುದು ಅಥವಾ ಷರಾದೊಡನೆ ಹಿಂದಿರುಗಿಸಬಹುದು ಮತ್ತು ತನಗೆ ಅವಶ್ಯವೆನಿಸಿದ ಅಂಥ ಹೆಚ್ಚಿನ ಮಾಹಿತಿಯನ್ನು ತರಿಸಿಕೊಳ್ಳಬಹುದು.

(6) (5)ನೇ ಉಪ ಪ್ರಕರಣದ ಅಡಿ ಅಂದಾಜನ್ನು ಹಿಂದಿರುಗಿಸಿದಾಗ, ಮಂಡಳಿಯು ಅಂಥ ಷರಗಳಿಗೆ ಅನುಸಾರವಾಗಿ ಅಂದಾಜನ್ನು ಪುನಃ ಪರಿಶೀಲಿಸಲು ಮುಂದಾಗತಕ್ಕದ್ದು ಮತ್ತು ಸರ್ಕಾರವು ಕೋರಿರುವ ಹೆಚ್ಚಿನ ಮಾಹಿತಿಯನ್ನು ಒದಗಿಸತಕ್ಕದ್ದು ಮತ್ತು ಅವಶ್ಯವಿದ್ದರೆ, ಅಂದಾಜನ್ನು ಮಾರ್ಪಡಿಸತಕ್ಕದ್ದು ಅಥವಾ ಬದಲಾಯಿಸತಕ್ಕದ್ದು ಮತ್ತು ಅದನ್ನು ಸರ್ಕಾರಕ್ಕೆ ಪುನಃ ಒಪ್ಪಿಸತಕ್ಕದ್ದು.

(7) ಸರ್ಕಾರವು ಅಂದಾಜನ್ನು ಮಾರ್ಪಾಟು ಮಾಡದೆ ಅಥವಾ ಮಾರ್ಪಾಟುಗಳೊಡನೆ ಮಂಜೂರು ಮಾಡತಕ್ಕದ್ದು.

(8) ಹಣಕಾಸು ವರ್ಷದ ಪ್ರಾರಂಭಕ್ಕೆ ಮೊದಲು ಸರ್ಕಾರದಿಂದ ಮಂಜೂರಾಗದ ಅಂಥ ಯಾವುದೇ ಅಂದಾಜು ಯಾವ ವರ್ಷಕ್ಕೆ ಸಂಬಂಧಿಸಿದೆಯೋ, ಆ ವರ್ಷಕ್ಕಾಗಿ ಸರ್ಕಾರವು ತನ್ನ ಅಭಿಪ್ರಾಯದಲ್ಲಿ ಸೂಕ್ತವೆಂದು ಭಾವಿಸಬಹುದಾದ ಅಂಥ ವೆಚ್ಚವನ್ನು ಮಾಡಲು, ಸರ್ಕಾರವು, ಅಂದಾಜಿನ ಅನುಮೋದನೆಯನ್ನು ಮಂಡಳಿಗೆ ತಿಳಿಸುವವರೆಗೆ, ಸರ್ಕಾರವು ಮಂಡಳಿಗೆ ಅಧಿಕಾರ ನೀಡಬಹುದು.

**84. ಪೂರಕ ಅಂದಾಜುಗಳ ತಯಾರಿಕೆ.–** ಮಂಡಳಿಯು, ಸರ್ಕಾರವು ಯಾವ ವರ್ಷಕ್ಕಾಗಿ ಅಚಿದಾಜನ್ನು ಮಂಜೂರು ಮಾಡಿದೆಯೋ ಆ ವರ್ಷದ ಉಳಿಕೆಯ ಅವಧಿಗಾಗಿ ಒಂದು ಅಥವಾ ಹೆಚ್ಚಿಗೆ ಪೂರಕ ಅಂದಾಜುಗಳನ್ನು ತಯಾರಿಸುವಂತೆ ಮಾಡಬಹುದು ಮತ್ತು 83ನೇ ಪ್ರಕರಣದ ಉಪ ಬಂಧಗಳು ಆದಷ್ಟು ಮಟ್ಟಿಗೆ, ಅವು ಮೂಲ ವಾರ್ಷಿಕ ಅಂದಾಜುಗಳಾಗಿದ್ದರೆ ಹೇಗೋ ಹಾಗೇ, ಅನ್ವಯಿಸತಕ್ಕದ್ದು.

**85. ಅಂದಾಜುಗಳಲ್ಲಿಯ ಮೊಬಲಗಿನ ಪುನರ್‌ವಿನಿಯೋಗ.–** ಈ ಸಂಬಂಧವಾಗಿ ಸರ್ಕಾರವು ನೀಡುವ ಯಾವುವೇ ನಿರ್ದೇಶನಗಳಿಗೆ ಒಳಪಟ್ಟು, ಹಣದ ಯಾವುದೇ ಮೊತ್ತ ಅಥವಾ ಸರ್ಕಾರವು ಮಂಜೂರು ಮಾಡಿರುವ ಪ್ರಸ್ತುತ ಜಾರಿಯಲ್ಲಿರುವ ಅಂದಾಜಿನಲ್ಲಿ ವೆಚ್ಚಮಾಡಲು ಅಧಿಕಾರ ನೀಡಿದ ಅದರ ಭಾಗ ಮತ್ತು ಹಾಗೆ ಖರ್ಚುಮಾಡದೆ ಉಳಿದದ್ದನ್ನು, ಸದರಿ ಅಂದಾಜಿನಲ್ಲಿ ಅಧಿಕಾರ ನೀಡಿದ ಯಾವುದೇ ಇತರ ವೆಚ್ಚಗಳ ಹೆಚ್ಚಳವನ್ನು ಭರಿಸಲು ಮಂಡಳಿಯು ಯಾವುದೇ ಸಮಯದಲ್ಲಿ ಪುನರ್ ವಿನಿಯೋಗಿಸಬಹುದು.

**86. ತುರ್ತುಪರಿಸ್ಥಿತಿಯನ್ನು ಹೊರತುಪಡಿಸಿ ಅಂದಾಜಿಗೆ ಅಂಟಿಕೊಳ್ಳುವುದು.–** (1) 85ನೇ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ಸರ್ಕಾರವು ಈ ಸಂಬಂಧವಾಗಿ ನಿಗದಿ ಪಡಿಸಬಹುದಾದ ಅಂಥ ಮೊಬಲಗನ್ನು ಮೀರದ ಮೊತ್ತವನ್ನು, ಸರ್ಕಾರದಿಂದ ಅಂತಿಮವಾಗಿ ಮಂಜೂರಾಗಿರುವ, ಪ್ರಸ್ತುತ ಜಾರಿಯಲ್ಲಿರುವ ಮಂಡಳಿಯ ಯಾವುದಾದರೊಂದು ಅಂದಾಜಿನಲ್ಲಿ ಒಳಗೊಂಡಿರದ ಹೊರತು, ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ಉಳಿಸುವಿಕೆ, ವಿಸ್ತರಣೆಯನ್ನು ಮಂಡಳಿಯು ತನ್ನ ಪರವಾಗಿ ಅಥವಾ ಮಂಡಳಿಯಿಂದ ಮಾಡತಕ್ಕದ್ದಲ್ಲ.

(2) ತುರ್ತು ಪರಿಸ್ಥಿತಿಯ ಒತ್ತಡದ ಮೇಲೆ ಮಂಡಳಿಯು ಹಾಗೆ ಮಾಡಿದ ವಿಸ್ತರಣೆಯು ಒಂದುವೇಳೆ, (1)ನೇ ಉಪ ಪ್ರಕರಣದ ಅಡಿಯಲ್ಲಿ ಈ ಸಂಬಂಧವಾಗಿ ನಿಗದಿ ಪಡಿಸಿದ ಅಂಥ ಮಿತಿಯನ್ನು ಮೀರಿದರೆ, ಆ ಪರಿಸ್ಥಿತಿಯನ್ನು, ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿಯು, ಅಂಥ ಹೆಚ್ಚುವರಿ ವೆಚ್ಚವನ್ನು ಭರಿಸುವ ಯಾವ ವಿಧಾನವನ್ನು ಮಂಡಳಿಯು ಉದ್ದೇಶಿಸಿದೆ ಎಂಬ ವಿವರಣೆಯೊಂದಿಗೆ ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು.

**87. ವೇತನಗಳು, ಭತ್ಯೆಗಳು, ನಿವೃತ್ತಿ ವೇತನಗಳು ಇತ್ಯಾದಿಗಳಿಗಾಗಿ ಹೊಣೆಗಾರಿಕೆಯನ್ನು ಭರಿಸುವುದಕ್ಕೆ ಮಂಡಳಿಯ ಕರ್ತವ್ಯ.–** ಈ ಮುಂದಿನ ವಾರ್ಷಿಕ ಆಯವ್ಯಯ ಅಂದಾಜುಗಳನ್ನು ತಯಾರಿಸುವಾಗ ಮತ್ತು ವರ್ಷಕ್ಕೆ ವೆಚ್ಚಗಳನ್ನು ಮಾಡುವಾಗ,–

(ಎ) (i) ಮಂಡಳಿಯ ಅಧ್ಯಕ್ಷರು ಮತ್ತು ಇತರ ಸದಸ್ಯರಿಗೆ ಬಾಕಿ ಇರುವ,

(ii) ಮಂಡಳಿಯ ನೌಕರರಿಗೆ ಬಾಕಿ ಇರುವ, ಮತ್ತು

(iii) ಅಂಥ ನೌಕರರ ಜೀವಂತ ಬಂಧುಗಳು, ಯಾರಾದರೂ ಇದ್ದಲ್ಲಿ, ಅವರಿಗೆ ಬಾಕಿ ಇರುವ,

- ವೇತನಗಳು, ಶುಲ್ಕಗಳು, ಪರಿಶ್ರಮ ಧನ, ಭತ್ಯೆಗಳು, ನಿವೃತ್ತಿ ವೇತನಗಳು, ಉಪದಾನಗಳು, ಅನುಕಂಪ ಭತ್ಯೆಗಳು ಅಥವಾ ಇತರ ಹಣ;

(ಬಿ) ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರಕ್ಕೆ, ಅಂಥ ಸರ್ಕಾರವು ಮಂಡಳಿಗೆ ಎರವಲು ನೀಡಿರುವ ಯಾವೊಬ್ಬ ಅಧಿಕಾರಿಯ ನಿವೃತ್ತಿ ವೇತನ ಮತ್ತು ರಜೆ ಭತ್ಯೆಗಳನ್ನು ಸಂದಾಯ ಮಾಡಬೇಕಾದ ಕಾರಣದಿಂದ ದೇಣಿಗೆಗಳು, ಯಾವುದಾದರೂ ಇದ್ದಲ್ಲಿ;

(ಸಿ) ಮಂಡಳಿಯು ಸ್ಥಾಪಿಸಿದ ಯಾವುದಾದರೂ ಭವಿಷ್ಯ ನಿಧಿ, ಕಲ್ಯಾಣ ನಿಧಿ, ಸಾಲ ಅಥವಾ ವಿಶೇಷ ನಿಧಿಯನ್ನು ನಿರ್ವಹಿಸುವಲ್ಲಿ ಮತ್ತು ಆಡಳಿತ ನಡೆಸುವಲ್ಲಿ ಮಂಡಳಿಗೆ ಆಗಿರುವ ಖರ್ಚು ಮತ್ತು ವೆಚ್ಚಗಳು, ಯಾವುದಾದರೂ ಇದ್ದಲ್ಲಿ,

– ಅವುಗಳನ್ನು ಭರಿಸುವ ಹೊಣೆಗಾರಿಕೆಯ ಕರ್ತವ್ಯವು ಮಂಡಳಿಯದ್ದಾಗಿರತಕ್ಕದ್ದು.

**88. ಲೆಕ್ಕಪತ್ರಗಳು ಮತ್ತು ಲೆಕ್ಕ ಪರಿಶೋಧನೆ.–** (1) ಮಂಡಳಿಯು, ಸರ್ಕಾರವು ಅನುಮೋದಿಸಿದ ಅಂಥ ನಮೂನೆಯಲ್ಲಿ ಸೂಕ್ತ ಲೆಕ್ಕಪತ್ರಗಳನ್ನು ಮತ್ತು ಇತರ ಸಂಬಂಧಿಸಿದ ದಾಖಲೆಗಳನ್ನು ಮತ್ತು ವಾರ್ಷಿಕ ಆಯವ್ಯಯ ಪಟ್ಟಿಯನ್ನು ಒಳಗೊಂಡ ಲೆಕ್ಕಪತ್ರಗಳ ತ:ಖ್ತೆಯನ್ನು ಸೂಕ್ತವಾದ ರೀತಿಯಲ್ಲಿ ಇಟ್ಟುಕೊಂಡು ಬರತಕ್ಕದ್ದು.

(2) ಮಂಡಳಿಯು, ಲೆಕ್ಕಪತ್ರಗಳನ್ನು ಪ್ರತಿವರ್ಷದಲ್ಲಿ ಒಮ್ಮೆ ಪರಿಶೋಧಿಸತಕ್ಕದ್ದು ಮತ್ತು ಅವಶ್ಯವಿದ್ದಾಗ ಸರ್ಕಾರವು ಅಂಥ ಲೆಕ್ಕಪತ್ರಗಳ ಸಂಕಲನವನ್ನು, ಭಾರತದ ನಿಯಂತ್ರಕರು ಮತ್ತು ಲೆಕ್ಕಪರಿಶೋಧಕರೊಡನೆ (ಇಲ್ಲಿ ಇನ್ನು ಮುಂದೆ ಲೆಕ್ಕ ಪರಿಶೋಧಕರು ಎಂದು ಉಲ್ಲೇಖಿಸಲಾಗುವುದು) ಸಮಾಲೋಚಿಸಿ ಸರ್ಕಾರವು ನೇಮಿಸಿದ ಲೆಕ್ಕ ಪರಿಶೋಧಕರಿಂದ ಸಹವರ್ತಿಯಾಗಿ ಪರಿಶೋಧಿಸತಕ್ಕದ್ದು ಮತ್ತು ಅಂಥ ಲೆಕ್ಕ ಪರಿಶೋಧಕರಿಗೆ ಅಂಥ ಲೆಕ್ಕ ಪರಿಶೋಧನೆಗಾಗಿ ಮಂಡಳಿಯು ನೀಡುವ ಯಾವುದೇ ಮೊತ್ತವನ್ನು ಮಂಡಳಿಯ ಸಾಮಾನ್ಯ ಲೆಕ್ಕಕ್ಕೆ ಖರ್ಚು ಹಾಕತಕ್ಕದ್ದು.

(3) ಸರ್ಕಾರದ ಲೆಕ್ಕಪತ್ರಗಳ ಪರಿಶೋಧನೆಯ ಸಂಬಂಧದಲ್ಲಿ, ಭಾರತದ ನಿಯಂತ್ರಕರು ಮತ್ತು ಲೆಕ್ಕ ಪರಿಶೋಧಕರಿಗೆ ಇರುವಂಥದೇ ಹಕ್ಕು, ವಿಶೇಷ ಸ್ಥಾನಮಾನ ಮತ್ತು ಅಧಿಕಾರವು, ಮಂಡಳಿಯ ಲೆಕ್ಕಪತ್ರಗಳನ್ನು ಪರಿಶೋಧಿಸುವ ಸಂಬಂಧದಲ್ಲಿ, ಲೆಕ್ಕಪತ್ರಗಳ ಪರಿಶೋಧಕನಿಗೆ ಇರತಕ್ಕದ್ದು ಮತ್ತು ವಿಶೇಷವಾಗಿ ಲೆಕ್ಕಪತ್ರಗಳ ಪುಸ್ತಕಗಳು, ಸಂಬಂಧಿಸಿದ ವೋಚರ್‌ಗಳು ಮತ್ತು ಮಂಡಳಿಯ ಇತರ ದಸ್ತಾವೇಜುಗಳನ್ನು ಹಾಜರುಪಡಿಸುವಂತೆ ಕೋರುವ ಅಧಿಕಾರವು ಇರತಕ್ಕದ್ದು.

**89. ಲೆಕ್ಕ ಪರಿಶೋಧನಾ ವರದಿಯ ಪ್ರಕಟಣೆ.–** (1) ಮಂಡಳಿಯ ಲೆಕ್ಕಪತ್ರಗಳ ಪರಿಶೋಧನೆ ಮತ್ತು ತಪಾಸಣೆ ಪೂರ್ಣಗೊಂಡ ತರುವಾಯ ಹದಿನಾಲ್ಕು ದಿನಗಳ ಒಳಗೆ ಲೆಕ್ಕಪರಿಶೋಧಕರು ಲೆಕ್ಕ ಪರಿಶೋಧನೆಯ ವರದಿಯ ಪ್ರತಿಗಳನ್ನು ಸರ್ಕಾರಕ್ಕೆ ಮತ್ತು ಮಂಡಳಿಗೆ ಕಳುಹಿಸತಕ್ಕದ್ದು.

(2) ಸರ್ಕಾರವು ಅಂಥ ವರದಿಯನ್ನು ಸ್ವೀಕರಿಸಿದ ಮೇಲೆ ಆದಷ್ಟು ಬೇಗನೆ ರಾಜ್ಯ ವಿಧಾನ ಮಂಡಲದ ಮುಂದೆ ಮೂವತ್ತು ದಿನಗಳಿಗೆ ಕಡಿಮೆಯಲ್ಲದ ಪ್ರತಿಯೊಂದು ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರವು ಮಂಡಿಸತಕ್ಕದ್ದು.

**90. ಲೆಕ್ಕ ಪರಿಶೋಧನಾ ವರದಿಯಲ್ಲಿ ತೋರಿಸಿರುವ ದೋಷಗಳ ಮತ್ತು ಕ್ರಮದೋಷಗಳಿಗೆ ಮಂಡಳಿಯಿಂದ ಪರಿಹಾರೋಪಾಯ.–** ಮಂಡಳಿಯ ಆಯವ್ಯಯದ ಮೇಲಿನ ಲೆಕ್ಕ ಪರಿಶೋಧನಾ ವರದಿಯಲ್ಲಿ ಲೆಕ್ಕ ಪರಿಶೋಧಕರು ತೋರಿಸಿರುವ ದೋಷಗಳು ಮತ್ತು ಕ್ರಮದೋಷಗಳ ಬಗ್ಗೆ ತಕ್ಷಣ ಪರ್ಯಾಲೋಚನೆಗೆ ತೆಗೆದುಕೊಳ್ಳತಕ್ಕದ್ದು ಮತ್ತು ಮಂಡಳಿಯು ತನಗೆ ಸೂಕ್ತವೆಂದು ಕಂಡುಬಂದ ರೀತಿಯಲ್ಲಿ ಕ್ರಮಕೈಗೊಳ್ಳತಕ್ಕದ್ದು ಮತ್ತು ಹಾಗೆಯೇ ತೆಗೆದುಕೊಂಡ ಕ್ರಮದ ಬಗ್ಗೆ ಒಂದು ವರದಿಯನ್ನು ಸರ್ಕಾರಕ್ಕೆ ಕಳುಹಿಸತಕ್ಕದ್ದು.

**91. ಮಂಡಳಿ ಮತ್ತು ಲೆಕ್ಕ ಪರಿಶೋಧಕರ ನಡುವಿನ ಭಿನ್ನಾಭಿಪ್ರಾಯದ ಸಂಬಂಧದಲ್ಲಿ ಸರ್ಕಾರದಿಂದ ತೀರ್ಮಾನ.–** ಒಂದು ವೇಳೆ ಮಂಡಳಿಯ ಮತ್ತು ಲೆಕ್ಕಪರಿಶೋಧಕರ ನಡುವೆ, ಲೆಕ್ಕಪರಿಶೋಧನಾ ವರದಿಯು ಒಳಗೊಂಡಂತೆ ಯಾವುದೇ ಅಂಶದ ಬಗ್ಗೆ ಭಿನ್ನಾಭಿಪ್ರಾಯ ಉಂಟಾದರೆ ಮತ್ತು ಮಂಡಳಿಯು, ಆತನು ಅಂಥ ಅಂಶಗಳ ಮೇಲೆ ಮಾಡಿದ ಶಿಫಾರಸ್ಸುಗಳು, ಯಾವುದಾದರೂ ಇದ್ದರೆ, ಅವುಗಳನ್ನು ಒಪ್ಪಲು ಮತ್ತು ಅಳವಡಿಸಲು ಸಾಧ್ಯವಾಗದಿದ್ದಾಗ, ವಿಷಯವನ್ನು ತಕ್ಷಣವೇ ಸರ್ಕಾರಕ್ಕೆ ಕಳುಹಿಸತಕ್ಕದ್ದು, ಸರ್ಕಾರವು ಅದರ ಮೇಲೆ ಅಂತಿಮ ಆದೇಶವನ್ನು ಹೊರಡಿಸತಕ್ಕದ್ದು ಮತ್ತು ಮಂಡಳಿಯು ಅಂಥ ಆದೇಶವನ್ನು ಜಾರಿಗೊಳಿಸಲು ಬದ್ಧವಾಗಿರತಕ್ಕದ್ದು.

## ಅಧ್ಯಾಯ – IX

## ಸರ್ಕಾರದ ಮೇಲ್ವಿಚಾರಣೆ ಮತ್ತು ನಿಯಂತ್ರಣ

**92. ಆಡಳಿತ ವರದಿ.–** (1) ಪ್ರತಿವರ್ಷದ ಏಪ್ರಿಲ್ ಮೊದಲ ದಿನದ ನಂತರ ಆದಷ್ಟು ಬೇಗನೆ ಮತ್ತು ಈ ಬಗ್ಗೆ ಸರ್ಕಾರವು ನಿಗದಿಪಡಿಸಬಹುದಾದಂಥ ದಿನಾಂಕವನ್ನು ಮೀರದಂತೆ ಸರ್ಕಾರವು ನಿಯಮಿಸಿದ ನಮೂನೆಯಲ್ಲಿ, ಕಳೆದ ವರ್ಷದ ಮಾರ್ಚ್ ಮೂವತ್ತೊಂದನೇ ದಿನಕ್ಕೆ ಅಂತ್ಯಗೊಂಡಂತೆ ಆ ವರ್ಷದಲ್ಲಿಯ ಬಂದರುಗಳ ಆಡಳಿತದ ಸವಿವರ ಆಡಳಿತ ವರದಿಯನ್ನು ಮಂಡಳಿಯು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

(2) ಸರ್ಕಾರವು ಅಂಥ ವರದಿಯನ್ನು ಸ್ವೀಕರಿಸಿದ ನಂತರ, ಆದಷ್ಟು ಬೇಗನೆ, ಅಂಥ ವರದಿಯನ್ನು, ರಾಜ್ಯ ವಿಧಾನಮಂಡಲದ ಮುಂದೆ ಮೂವತ್ತು ದಿನಗಳಿಗೆ ಕಡಿಮೆಯಲ್ಲದ ಅವಧಿಯವರೆಗೆ ಸರ್ಕಾರವು ಮಂಡಿಸತಕ್ಕದ್ದು.

**93. ಸರ್ಕಾರಕ್ಕೆ ಆದಾಯ ಮತ್ತು ವೆಚ್ಚಗಳ ವಿವರ ಪಟ್ಟಿಯನ್ನು ಸಲ್ಲಿಸುವುದು.–** (1) ಮಂಡಳಿಯು ವಾರ್ಷಿಕವಾಗಿ ಅಥವಾ ಅನೇಕಸಲ ಅಥವಾ ಸರ್ಕಾರವು ಹಾಗೆ ಮಾಡಲು ನಿರ್ದೇಶಿಸಿದರೆ, ಸರ್ಕಾರವು ನಿಯಮಿಸಲಾದಂಥ ನಮೂನೆಯಲ್ಲಿ ಮತ್ತು ಅಂಥ ಸಮಯದಲ್ಲಿ ಆದಾಯ ಮತ್ತು ವೆಚ್ಚಗಳ ವಿವರ ಪಟ್ಟಿಯನ್ನು ಸಲ್ಲಿಸತಕ್ಕದ್ದು.

(2) ಎಲ್ಲಾ ಅಂಥ ವಿವರ ಪಟ್ಟಿಗಳ ಪ್ರತಿಗಳು, ಸಾರ್ವಜನಿಕರಿಗೆ ಮಂಡಳಿಯ ಕಚೇರಿಯಲ್ಲಿ, ಕಚೇರಿಯ ವೇಳೆಯಲ್ಲಿ, ಮಂಡಳಿಯು ಕಾಲಕಾಲಕ್ಕೆ ಪ್ರತಿ ತಪಾಸಣೆಗೆ ನಿರ್ದಿಷ್ಟ ಪಡಿಸಿದಂಥ ಶುಲ್ಕವನ್ನು ಸಂದಾಯಮಾಡಿ, ತಪಾಸಣೆಗೆ, ಮುಕ್ತವಾಗಿರತಕ್ಕದ್ದು.

**94. ಮಂಡಳಿಯನ್ನು ರದ್ದುಗೊಳಿಸಲು ಸರ್ಕಾರಕ್ಕೆ ಅಧಿಕಾರ.–** (1) ಸರ್ಕಾರದ ಅಭಿಪ್ರಾಯದಲ್ಲಿ ಒಂದು ವೇಳೆ, ಯಾವುದೇ ಸಮಯದಲ್ಲಿ,–

(ಎ) ಗಂಭೀರ ತುರ್ತುಪರಿಸ್ಥಿತಿಯ ಕಾರಣದಿಂದಾಗಿ ಮಂಡಳಿಯು ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಅಥವಾ ಇತರೆ ಯಾವುದೇ ಕಾನೂನಿನ ಅಡಿಯಲ್ಲಿ ಅದರ ಮೇಲೆ ವಿಧಿಸಿದ ಕರ್ತವ್ಯಗಳನ್ನು ನಿರ್ವಹಿಸಲು ಅಶಕ್ತವಾದರೆ; ಅಥವಾ

(ಬಿ) ಮಂಡಳಿಯು, ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಅಥವಾ ಇತರೆ ಯಾವುದೇ ಕಾನೂನಿನ ಅಡಿಯಲ್ಲಿ ವಿಧಿಸಲಾದ ಕರ್ತವ್ಯಗಳನ್ನು ನಿರ್ವಹಿಸುವಲ್ಲಿ ಸತತವಾಗಿ ಕರ್ತವ್ಯ ಲೋಪವೆಸಗಿದ್ದಲ್ಲಿ ಮತ್ತು ಅಂಥ ಕರ್ತವ್ಯ ಲೋಪದ ಪರಿಣಾಮವಾಗಿ ಮಂಡಳಿಯ ಆರ್ಥಿಕ ಪರಿಸ್ಥಿತಿಯು ಅಥವಾ ಬಂದರುಗಳ ಆಡಳಿತವು ಅತಿಯಾದ ದುಸ್ಥಿತಿಯನ್ನು ತಲುಪಿದ್ದರೆ; ಅಥವಾ

(ಸಿ) ಸರ್ಕಾರವು, ರಾಜ್ಯಪತ್ರದಲ್ಲಿ ಅಧಿಸೂಚನೆಯನ್ನು ಹೊರಡಿಸುವ ಮೂಲಕ, ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದ, ಒಂದು ಸಲಕ್ಕೆ ಆರು ತಿಂಗಳುಗಳವರೆಗೆ ಮೀರದ, ಅಂಥ ಅವಧಿಯವರೆಗೆ ಮಂಡಳಿಯನ್ನು ರದ್ದುಪಡಿಸಬಹುದು:

ಪರಂತು, (ಬಿ) ಖಂಡದಲ್ಲಿ ತಿಳಿಸಿದ ಕಾರಣಗಳಿಗಾಗಿ ಈ ಉಪಪ್ರಕರಣದ ಅಡಿಯಲ್ಲಿ ಅಧಿಸೂಚನೆಯನ್ನು ಹೊರಡಿಸುವ ಮೊದಲು, ಸರ್ಕಾರವು, ಮಂಡಳಿಗೆ ರದ್ದತಿಯನ್ನು ಏಕೆ ಮಾಡಬಾರದು ಎಂಬ ಕಾರಣ ಕೇಳುವುದಕ್ಕೆ ಸಾಕಷ್ಟು ಅವಕಾಶವನ್ನು ನೀಡಿ ಮಂಡಳಿಯು ನೀಡಿದ ವಿವರಣೆ ಮತ್ತು ಆಕ್ಷೇಪಣೆಗಳು, ಏನಾದರೂ ಇದ್ದರೆ, ಅವುಗಳನ್ನು ಪರಿಗಣಿಸತಕ್ಕದ್ದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಮಂಡಳಿಯನ್ನು ರದ್ದು ಪಡಿಸಲು ಅಧಿಸೂಚನೆಯನ್ನು ಹೊರಡಿಸಿದ ತರುವಾಯ,–

(ಎ) ಮಂಡಳಿಯ ಎಲ್ಲಾ ಸದಸ್ಯರು, ರದ್ಧತಿಯ ದಿನಾಂಕದಿಂದ ಅಂಥ ಮಂಡಳಿಯ ಸದಸ್ಯತ್ವದ ಸ್ಥಾನವನ್ನು ತೆರವು ಮಾಡತಕ್ಕದ್ದು ;

(ಬಿ) ಈ ಅಧಿಸೂಚನೆಯ ಉಪಬಂಧಗಳ ಅಡಿಯಲ್ಲಿ ಅಥವಾ ಇತರೆ ಯಾವುದೇ ಕಾನೂನಿನಲ್ಲಿ ಎಲ್ಲಾ ಅಧಿಕಾರಗಳು ಮತ್ತು ಕರ್ತವ್ಯಗಳನ್ನು ಮಂಡಳಿಯ ಪರವಾಗಿ ಚಲಾಯಿಸಲು ಮತ್ತು ನಿರ್ವಹಿಸಲು ಸರ್ಕಾರವು ನಿರ್ದೇಶಿಸಿದ ಅಂಥ ವ್ಯಕ್ತಿ ಅಥವಾ ವ್ಯಕ್ತಿಗಳು, (3)ನೇ ಉಪಪ್ರಕರಣದ (ಬಿ) ಖಂಡ ಅಥವಾ (ಸಿ) ಖಂಡದ ಅಡಿಯಲ್ಲಿ ಮಂಡಳಿಯನ್ನು ಪುನರ್‌ರಚಿಸುವವರೆಗೆ, ಮಂಡಳಿಯ ಪರವಾಗಿ ಚಲಾಯಿಸತಕ್ಕದ್ದು ಮತ್ತು ನಿರ್ವಹಿಸತಕ್ಕದ್ದು;

(ಸಿ) ಮಂಡಳಿಯಲ್ಲಿ ನಿಹಿತವಾದ ಎಲ್ಲಾ ಆಸ್ತಿಯು (3)ನೇ ಉಪಪ್ರಕರಣದ (ಬಿ) ಖಂಡ ಅಥವಾ (ಸಿ) ಖಂಡದ ಅಡಿಯಲ್ಲಿ ಮಂಡಳಿಯನ್ನು ಪುನರ್‌ರಚಿಸುವವರೆಗೆ, ಸರ್ಕಾರದಲ್ಲಿ ನಿಹಿತವಾಗಿರತಕ್ಕದ್ದು.

(3) (1)ನೇ ಉಪಪ್ರಕರಣದ ಅಡಿಯಲ್ಲಿ ಹೊರಡಿಸಿದ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ರದ್ದತಿ ಅವಧಿಯು ಮುಕ್ತಾಯಗೊಂಡ ನಂತರ, ಸರ್ಕಾರವು,–

(ಎ) ಅದು ಅವಶ್ಯವೆಂದು ಭಾವಿಸಬಹುದಾದಂಥ, ಆರು ತಿಂಗಳ ಅವಧಿಗೆ ಮೀರದ, ಅಂಥ ರದ್ದತಿ ಅವಧಿಯನ್ನು ಪುನಃ ವಿಸ್ತರಿಸಬಹುದು; ಅಥವಾ

(ಬಿ) ಮಂಡಳಿಯನ್ನು ಹೊಸ ನೇಮಕಾತಿಗಳೊಡನೆ ಪುನರ್ ರಚಿಸಬಹುದು ಮತ್ತು ಅಂಥ ಪ್ರಕರಣದಲ್ಲಿ (2)ನೇ ಉಪಪ್ರಕರಣದ (ಎ) ಖಂಡದ ಅಡಿಯಲ್ಲಿ ತಮ್ಮ ಸ್ಥಾನಗಳನ್ನು ತೆರವುಮಾಡಿದ ವ್ಯಕ್ತಿಗಳನ್ನು ನೇಮಕಾತಿ ಮಾಡಲು ಅನರ್ಹರೆಂದು ಭಾವಿಸತಕ್ಕದ್ದಲ್ಲ; ಅಥವಾ

(ಸಿ) ಅದು ಅವಶ್ಯವೆಂದು ಭಾವಿಸಬಹುದಾದ ಅಂಥ ಅವಧಿಯವರೆಗೆ ಮಾತ್ರ ನೇಮಕಾತಿ ಮಾಡುವ ಮೂಲಕ ಮಂಡಳಿಯನ್ನು ಪುನರ್ ರಚಿಸಬಹುದು ಮತ್ತು ಅಂಥ ಪ್ರಕರಣದಲ್ಲಿ (2)ನೇ ಉಪ ಪ್ರಕರಣದ (ಎ) ಖಂಡದ ಅಡಿಯಲ್ಲಿ ತಮ್ಮ ಸ್ಥಾನವನ್ನು ತೆರವು ಮಾಡಿದ ವ್ಯಕ್ತಿಗಳು, ಮಂಡಳಿಯು ರದ್ದಾಗುವಾಗ ಕೇವಲ ಅವರು ಮಂಡಳಿಯ ಸದಸ್ಯರಾಗಿದ್ದರು ಎಂಬ ಕಾರಣಕ್ಕಾಗಿ, ಅಂಥ ನೇಮಕಾತಿಗಾಗಿ ಅನರ್ಹರೆಂದು ಭಾವಿಸತಕ್ಕದ್ದಲ್ಲ:

ಪರಂತು, ಸರ್ಕಾರವು, ರದ್ಧತಿಯ ಅವಧಿಯಲ್ಲಿ ಯಾವುದೇ ಸಮಯದಲ್ಲಿ, (1)ನೇ ಉಪ ಪ್ರಕರಣದ ಅಡಿಯಲ್ಲಿ ಮೂಲತಃ ನಿರ್ದಿಷ್ಟ ಪಡಿಸಿದ ಅಥವಾ ಈ ಉಪಪ್ರಕರಣದಲ್ಲಿ ವಿಸ್ತರಿಸಿದಂತೆ, ಈ ಉಪಪ್ರಕರಣದ (ಬಿ) ಖಂಡ ಅಥವಾ (ಸಿ) ಖಂಡದ ಅಡಿಯಲ್ಲಿ ಕ್ರಮ ಕೈಗೊಳ್ಳತಕ್ಕದ್ದು.

(4) ಸರ್ಕಾರವು (1)ನೇ ಉಪಪ್ರಕರಣದ ಅಡಿಯಲ್ಲಿ ಅಧಿಸೂಚನೆಯನ್ನು ಹೊರಡಿಸುವಂತೆ ಮಾಡತಕ್ಕದ್ದು ಮತ್ತು ಈ ಪ್ರಕರಣದ ಅಡಿಯಲ್ಲಿ ತೆಗೆದುಕೊಂಡ ಕ್ರಮದ ಬಗ್ಗೆ ಒಂದು ಪೂರ್ಣ ವರದಿಯನ್ನು ಹೊರಡಿಸತಕ್ಕದ್ದು ಹಾಗೂ ಅಂಥ ಕ್ರಮ ಕೈಗೊಳ್ಳಲು ಉಂಟಾದ ಪರಿಸ್ಥಿತಿಯನ್ನು ಅತಿ ಶೀಘ್ರ ಸಮಯದಲ್ಲಿ ರಾಜ್ಯ ವಿಧಾನ ಮಂಡಲದ ಮುಂದೆ ಮಂಡಿಸತಕ್ಕದ್ದು.

**95. ಮಂಡಳಿಗೆ ನಿರ್ದೇಶನಗಳನ್ನು ನೀಡಲು ಸರ್ಕಾರದ ಅಧಿಕಾರ.–** (1) ಸರ್ಕಾರವು ಕಾಲಕಾಲಕ್ಕೆ ಮಂಡಳಿಗೆ ಲಿಖಿತ ನಿರ್ದೇಶನ ನೀಡಬಹುದು:

ಪರಂತು, ಈ ಉಪ ಪ್ರಕರಣದ ಅಡಿಯಲ್ಲಿ ನಿರ್ದೇಶನಗಳನ್ನು ನೀಡುವ ಮೊದಲು ತನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ಮಂಡಳಿಗೆ ಅವಕಾಶವನ್ನು ನೀಡತಕ್ಕದ್ದು.

(2) ಸರ್ಕಾರದ ತೀರ್ಮಾನವು, ಅದು ಕಾರ್ಯನೀತಿಯ ವಿಷಯವಾಗಿರಲಿ ಅಥವಾ ಆಗಿಲ್ಲದಿರಲಿ, ಅಂತಿಮವಾಗಿರತಕ್ಕದ್ದು.

## ಅಧ್ಯಾಯ – X

## ದಂಡ ಇತ್ಯಾದಿಗಳು

**96. ಈ ಅಧಿನಿಯಮದ ಅಡಿಯಲ್ಲಿ ನೇಮಕಗೊಂಡ ವ್ಯಕ್ತಿಗಳು, ಕೆಲವು ಉದ್ದೇಶಗಳಿಗಾಗಿ ಸಾರ್ವಜನಿಕ ನೌಕರರಾಗಿರತಕ್ಕದ್ದು.–** ಈ ಅಧಿನಿಯಮದ ಅಡಿಯಲ್ಲಿ ಮಂಡಳಿಯಿಂದ ನೇಮಕಗೊಂಡ ಪ್ರತಿಯೊಬ್ಬ ವ್ಯಕ್ತಿಯು, ಭಾರತ ದಂಡ ಸಂಹಿತೆ, 1860ರ 166 ರಿಂದ 171 (ಎರಡೂ ಸೇರಿ) 184, 185 ಮತ್ತು 409ನೇ ಪ್ರಕರಣಗಳ ಉದ್ದೇಶಗಳಿಗಾಗಿ ಮತ್ತು ಭ್ರಷ್ಟಾಚಾರ ನಿವಾರಣಾ ಅಧಿನಿಯಮ, 1988ರ ಉದ್ದೇಶಗಳಿಗಾಗಿ, ಸದರಿ ಸಂಹಿತೆಯ 21ನೇ ಪ್ರಕರಣದ ಅರ್ಥ ವ್ಯಾಪ್ತಿಯಲ್ಲಿ ಸಾರ್ವಜನಿಕ ನೌಕರನೆಂದು ಭಾವಿಸತಕ್ಕದ್ದು.

**97. 27, 28, 29 ಮತ್ತು 31ನೇ ಪ್ರಕರಣಗಳ ಉಲ್ಲಂಘನೆಗಾಗಿ ದಂಡ.–** 27ನೇ ಪ್ರಕರಣ ಅಥವಾ 28ನೇ ಪ್ರಕರಣ ಅಥವಾ 29ನೇ ಪ್ರಕರಣದ ಅಡಿಯಲ್ಲಿ ಹೊರಡಿಸಿದ ಆದೇಶದ ಯಾವುವೇ ಉಪಬಂಧಗಳನ್ನು ಯಾರೊಬ್ಬರು ಉಲ್ಲಂಘಿಸಿದ್ದಲ್ಲಿ ಅಥವಾ 31ನೇ ಪ್ರಕರಣದ ಅಡಿಯಲ್ಲಿ ವಿಧಿಸಿದ ಯಾವುದೇ ಷರತ್ತುಗಳನ್ನು ಪಾಲಿಸಲು ತಪ್ಪಿದಲ್ಲಿ ಹತ್ತು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ಹಾಗೂ ಉಲ್ಲಂಘನೆ ಅಥವಾ

ತಪ್ಪುವಿಕೆಯು ಮುಂದುವರೆದಲ್ಲಿ, ಅಂಥ ಮೊದಲ ಉಲ್ಲಂಘನೆ ಅಥವಾ ತಪ್ಪುವಿಕೆಯ ನಂತರದ ಪ್ರತಿಯೊಂದು ದಿನಕ್ಕೆ ಐದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದಂಥ ಹೆಚ್ಚಿನ ಜುಲ್ಮಾನೆಯಿಂದ ಶಿಕ್ಷಿಸತಕ್ಕದ್ದು.

**98. ಅನುಮತಿಯಿಲ್ಲದೆ ಸರಕುಕಟ್ಟೆಗಳು, ಬಂದರು ಕಟ್ಟೆಗಳು ಮುಂತಾದವುಗಳ ಸ್ಥಾಪನೆಗಾಗಿ ದಂಡನೆ.–** 35ನೇ ಪ್ರಕರಣದ ಉಪಬಂಧಗಳ ಉಲ್ಲಂಘನೆಯನ್ನು ಮಾಡುವ ಯಾವೊಬ್ಬ ವ್ಯಕ್ತಿಯನ್ನು, ಮೊದಲನೇ ಉಲ್ಲಂಘನೆಗಾಗಿ ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಮತ್ತು ಮೊದಲ ಉಲ್ಲಂಘನೆಯ ನಂತರ ಮುಂದುವರೆದ ಉಲ್ಲಂಘನೆಗಾಗಿ ಪ್ರತಿದಿನಕ್ಕೆ ಐದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ಶಿಕ್ಷಿಸತಕ್ಕದ್ದು.

**99. ದರಗಳು ಮುಂತಾದವುಗಳನ್ನು ತಪ್ಪಿಸಿದುದಕ್ಕಾಗಿ ದಂಡನೆ.–** ಯಾವುವೇ ಸರಕುಗಳ ಅಥವಾ ಯಾವುವೇ ಸರಕುಗಳನ್ನು ಸಾಗಿಸುವ ನೌಕೆಗಳ ಸಂಬಂಧದಲ್ಲಿ ಕಾನೂನುಬದ್ಧವಾಗಿ ಮಂಡಳಿಗೆ ಬಾಕಿ ಇರುವ ದರಗಳ ಸಂದಾಯವನ್ನು ಉದ್ದೇಶಪೂರ್ವಕವಾಗಿ ತಪ್ಪಿಸುವ ಯಾವೊಬ್ಬ ವ್ಯಕ್ತಿಯನ್ನು, ಆತನು,–

(ಎ) ಅಂಥ ಸರಕಿನ ತೂಕ, ಪರಿಮಾಣ, ಮೌಲ್ಯ ಅಥವಾ ವಿವರಣೆಯನ್ನು ಅಥವಾ ಅಂಥ ದರಗಳನ್ನು ನಿರ್ಧರಿಸಲು ಅವನಿಗೆ ಅನುವಾಗುವ ಉದ್ದೇಶಕ್ಕಾಗಿ ಮಂಡಳಿಯ ನೌಕರನಿಗೆ ನೀಡಿದ ಯಾವುದೇ ದಾಖಲೆಯಲ್ಲಿ ಯಾವುದೇ ನೌಕೆಯ ಸಾಮರ್ಥ್ಯವನ್ನು ಕಡಿಮೆ ಹೇಳಿದರೆ ಅಥವಾ ಸರಿಯಾಗಿ ನೀಡದಿದ್ದರೆ ; ಅಥವಾ

(ಬಿ) ಅಂಥ ಸರಕುಗಳನ್ನು ಅಥವಾ ಅಂಥ ನೌಕೆಯನ್ನು ಸ್ಥಳಾಂತರಿಸುವುದು ಅಥವಾ ಸ್ಥಳಾಂತರಿಸಲು ಪ್ರಯತ್ನಿಸುವುದು ಅಥವಾ ಸ್ಥಳಾಂತರಿಸಲು ದುಷ್ಪ್ರೇರಿಸುವುದಕ್ಕಾಗಿ;

– ಕನಿಷ್ಠ ಐದುನೂರು ರೂಪಾಯಿಗಳಿಗೆ ಒಳಪಟ್ಟು, ಹಾಗೆ ಬಾಕಿ ಇರುವ ದರಗಳ ಮೊಬಲಗಿನ ಎರಡರಷ್ಟರವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡನೀಯನಾಗತಕ್ಕದ್ದು.

**100. ಮಂಡಳಿಯ ಸ್ವತ್ತಿನ ಮೌಲ್ಯ ಅಥವಾ ಹಾನಿಯ ವಸೂಲಿ.–** ಯಾವುದೇ ನೌಕೆಗೆ ಸಂಬಂಧಿಸಿದಂತೆ ಮಾರ್ಗದರ್ಶನ ಅಥವಾ ಕಮಾಂಡ್ ಹೊಂದಿರುವ ಯಾವೊಬ್ಬ ವ್ಯಕ್ತಿಯ ಅಥವಾ ಯಾವೊಬ್ಬ ನಾವಿಕ ಅಥವಾ ಅಂಥ ನೌಕೆಯ ನೌಕರನಾಗಿ ನಿಯೋಜಿತನಾದ ವ್ಯಕ್ತಿಯ ನಿರ್ಲಕ್ಷ್ಯದಿಂದಾಗಿ ಯಾವುದೇ ಹಡಗುಕಟ್ಟೆ, ಸರಕುಕಟ್ಟೆ, ಬಂದರುಕಟ್ಟೆ, ಸ್ಥಾಯಿ ಲಂಗರುಗಳು, ಸ್ಟೇಜ್, ಬಂದರುಕಾಪು, ಹಡಗು ಇಳಿದಾಣ ಅಥವಾ ಮಂಡಳಿಯ ಸ್ವಾಧೀನದಲ್ಲಿರುವ ಯಾವುದೇ ಕಾಮಗಾರಿಗೆ ಅಥವಾ ಮಂಡಳಿಗೆ ಸೇರಿದ ಯಾವುದೇ ಚರ ಸ್ವತ್ತಿಗೆ ಉಂಟಾದ ಅಂಥ ಹಾನಿಯ ಮೊತ್ತವನ್ನು, ಮಂಡಳಿಯ ಅರ್ಜಿಯ ಮೇಲೆ, ಅಂಥ ನೌಕೆಗೆ ಸೇರಿದ ದೋಣಿಗಳು, ಪಟಸ್ತಂಭಗಳು, ಬಿಡಿಭಾಗಗಳು, ಹಗ್ಗಗಳು, ಕೇಬಲ್‌ಗಳು, ಲಂಗರುಗಳು ಅಥವಾ ದಾಸ್ತಾನುಗಳ ಸಾಕಷ್ಟು ಭಾಗವನ್ನು, ಮ್ಯಾಜಿಸ್ಟ್ರೇಟರುಗಳ ವಾರಂಟಿನ ಅಡಿಯಲ್ಲಿ, ಜಪ್ತಿ ಅಥವಾ ಮಾರಾಟ ಮಾಡುವ ಮೂಲಕ ಅಂಥ ವಸೂಲಿಯ ಮೌಲ್ಯದ ಜೊತೆಗೆ ವಸೂಲಾತಿಗಳನ್ನು ಮಾಡತಕ್ಕದ್ದು:

ಪರಂತು, ಯಾವುದೇ ಮ್ಯಾಜಿಸ್ಟ್ರೇಟರನು, ನೌಕೆಯ ಮಾಲೀಕನನ್ನು ಸೂಕ್ತವಾಗಿ ಸಮನು ಮಾಡಿ ಅವನು ತನ್ನ ಮುಂದೆ ಹಾಜರಾಗಲು ತಿಳಿಸುವವರೆಗೆ ಮತ್ತು ಒಂದುವೇಳೆ ಅವನು ಹಾಜರಾಗದೆ, ಅವನು ತನ್ನ ಅಹವಾಲನ್ನು ಹೇಳಿಕೊಳ್ಳುವವರೆಗೆ ಅಂಥ ವಾರೆಂಟನ್ನು ಹೊರಡಿಸತಕ್ಕದ್ದಲ್ಲ:

ಮತ್ತು ಪರಂತು, ಆದೇಶ ಹೊರಡಿಸುವ ಸಮಯದಲ್ಲಿ ನೌಕೆಯು, ವಿದ್ಯುಕ್ತವಾಗಿ ಅಧಿಕೃತರಾದ ಮಂಡಳಿಯ ನೌಕರರ ಸ್ವಾಧೀನದಲ್ಲಿ ಇದ್ದರೆ ಮತ್ತು ಉಂಟಾದ ಹಾನಿಯನ್ನು, ಅಂಥ ನೌಕರನ ಆದೇಶಕ್ಕೆ, ಕೃತ್ಯಕ್ಕೆ ಅಥವಾ ಅನುಚಿತ ಲೋಪಕ್ಕೆ ಆರೋಪಿಸಲ್ಪಟ್ಟಿದ್ದ ಹೊರತು ಅಂಥ ವಾರೆಂಟನ್ನು ಹೊರಡಿಸತಕ್ಕದ್ದಲ್ಲ.

**101. ಮಂಡಳಿಯ ಜೊತೆ ಕರಾರು ಮುಂತಾದವುಗಳಲ್ಲಿ ವ್ಯಕ್ತಿಯ ಹಿತಾಸಕ್ತಿಯನ್ನು ಭಾರತೀಯ ದಂಡ ಸಂಹಿತೆಯ 168ನೇ ಪ್ರಕರಣದ ಅಡಿಯಲ್ಲಿ ಮಾಡಿದ ಅಪರಾಧವೆಂದು ಭಾವಿಸುವುದು.–** ಮಂಡಳಿಯ ನೌಕರನಾದ ಅಥವಾ ಸದಸ್ಯನಾದ ಯಾವೊಬ್ಬ ವ್ಯಕ್ತಿಯು, ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿಯಾಗಲಿ ಯಾವುದೇ ಕರಾರು ಅಥವಾ ಉದ್ಯೋಗದಲ್ಲಿ ಯಾವುದೇ ಪಾಲು ಅಥವಾ ಹಿತಾಸಕ್ತಿಯನ್ನು ಮಂಡಳಿಯಿಂದ ಅಥವಾ ಅದರ ಪರವಾಗಿ ಹೊಂದಿದ್ದರೆ ಅದನ್ನು ಭಾರತ ದಂಡ ಸಂಹಿತೆ, 1860ರ 168ನೇ ಪ್ರಕರಣದ ಅಡಿಯಲ್ಲಿ ಮಾಡಿದ ಅಪರಾಧವೆಂದು ಭಾವಿಸತಕ್ಕದ್ದು:

ಪರಂತು, ಈ ಪ್ರಕರಣದಲ್ಲಿ ಇರುವುದಾವುದೂ, 4ನೇ ಪ್ರಕರಣದ (ಡಿ) ಖಂಡದ ಪರಂತುಕದ ಅಡಿಯಲ್ಲಿ ಯಾವುದೇ ಕರಾರು ಅಥವಾ ಉದ್ಯೋಗದಲ್ಲಿ ಷೇರು ಅಥವಾ ಹಿತಾಸಕ್ತಿಯನ್ನು ಹೊಂದಿರದ ವ್ಯಕ್ತಿಗಳಿಗೆ ಅನ್ವಯಿಸತಕ್ಕದ್ದಲ್ಲ.

**102. ಇತರ ಅಪರಾಧಗಳು.–** ಈ ಅಧಿನಿಯಮದ ಅಥವಾ ಯಾವುದೇ ನಿಯಮದ, ವಿನಿಯಮದ ಯಾವುದೇ ಉಪಬಂಧಗಳು ಅಥವಾ ಅದರ ಅಡಿ ಮಾಡಿದ ಆದೇಶಗಳನ್ನು ಉಲ್ಲಂಘಿಸಿದುದಕ್ಕಾಗಿ, ಅದರಡಿಯಲ್ಲಿ ಯಾವುದೇ ದಂಡನೆಗೆ ಸ್ಪಷ್ಟವಾಗಿ ಉಪಬಂಧವನ್ನು ಕಲ್ಪಿಸಲಾಗಿಲ್ಲವೋ, ಅವುಗಳನ್ನು ಉಲ್ಲಂಘಿಸುವ ಯಾವೊಬ್ಬ ವ್ಯಕ್ತಿಯು ಒಂದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

**103. ಅಪರಾಧಗಳ ಸಂಜ್ಞೇಯತೆ.–** ಮಹಾನಗರ ಮ್ಯಾಜಿಸ್ಟ್ರೇಟ್‌ರ ಅಥವಾ ಪ್ರಥಮ ದರ್ಜೆಯ ನ್ಯಾಯಿಕ ಮ್ಯಾಜೆಸ್ಟ್ರೇಟರ ನ್ಯಾಯಾಲಯಕ್ಕೆ ಕಡಿಮೆಯಿಲ್ಲದ ಯಾವುದೇ ನ್ಯಾಯಾಲಯವು, ಈ ಅಧಿನಿಯಮದ ಅಡಿಯಲ್ಲಿ ಅಥವಾ ಅದರ ಅಡಿಯಲ್ಲಿ ರಚಿಸಿದ ಯಾವುದೇ ನಿಯಮ ಅಥವಾ ವಿನಿಯಮದ ಅಡಿಯಲ್ಲಿ ಶಿಕ್ಷಾರ್ಹವಾದ ಯಾವುದೇ ಅಪರಾಧದ ಬಗ್ಗೆ ಅಧಿವಿಚಾರಣೆ ಮಾಡತಕ್ಕದ್ದಲ್ಲ.

**104. ಕಂಪನಿಗಳಿಂದ ಅಪರಾಧ.–** (1) ಈ ಅಧಿನಿಯಮದ ಅಡಿಯಲ್ಲಿ ಅಪರಾಧವೆಸಗಿಸಿದ ವ್ಯಕ್ತಿಯು ಒಂದು ಕಂಪನಿಯಾಗಿದ್ದರೆ, ಅಪರಾಧವೆಸಗಿದ ಸಮಯದಲ್ಲಿ ಕಂಪನಿಯ ಪ್ರಭಾರ ಹೊಂದಿದ್ದ ಮತ್ತು ಕಂಪನಿಯ ವ್ಯವಹಾರಗಳನ್ನು ನಿರ್ವಹಿಸುವಲ್ಲಿ ಹೊಣೆಗಾರನಾಗಿದ್ದ, ಪ್ರತಿಯೊಬ್ಬ ವ್ಯಕ್ತಿಯನ್ನು ಹಾಗೂ ಕಂಪನಿಯನ್ನು ಅಪರಾಧದ ತಪ್ಪಿತಸ್ಥನೆಂದು ಭಾವಿಸತಕ್ಕದ್ದು ಮತ್ತು ವಿಚಾರಣೆಗೆ ಗುರಿಪಡಿಸತಕ್ಕದ್ದು ಹಾಗೂ ಅದರಂತೆ ದಂಡಿಸತಕ್ಕದ್ದು :

ಪರಂತು, ಅಂಥ ವ್ಯಕ್ತಿಯು, ತನ್ನ ಗಮನಕ್ಕೆ ಬಾರದೆ ಅಪರಾಧವು ಘಟಿಸಿರುವುದಾಗಿ ಅಥವಾ ತಾನು ಸಾಧ್ಯವಾದ ಎಲ್ಲಾ ಪ್ರಯತ್ನಗಳಿಂದ ಅಂಥ ಅಪರಾಧವನ್ನು ತಪ್ಪಿಸಲು ಪ್ರಯತ್ನಿಸಿರುವುದಾಗಿ ಸಾಬೀತು ಪಡಿಸಿದಲ್ಲಿ ಈ ಉಪಪ್ರಕರಣದಲ್ಲಿರುವುದಾವುದೂ ಈ ಅಧಿನಿಯಮದಲ್ಲಿ ಉಪಬಂಧಿಸಿದ ಅಂಥ ದಂಡನೆಗೆ ಆತನನ್ನು ಹೊಣೆಮಾಡತಕ್ಕದ್ದಲ್ಲ.

(2) (1)ನೇ ಉಪ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಈ ಅಧಿನಿಯಮದ ಅಡಿಯಲ್ಲಿ ಒಂದು ಕಂಪನಿಯು ಅಪರಾಧವೆಸಗಿದ್ದಾಗ ಮತ್ತು ಸಮ್ಮತಿ ಅಥವಾ ಪರೋಕ್ಷ ಸಮ್ಮತಿಯೊಡನೆ ಅಪರಾಧವು ಘಟಿಸಿರುವುದು ಸಾಬೀತಾದಾಗ, ಅಥವಾ ಕಂಪನಿಯ ಯಾವುದೇ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಇತರೆ ಯಾರದೇ ನಿರ್ಲಕ್ಷ್ಯದಿಂದ ಆದ ಅಪರಾಧವೆಂದು ಆರೋಪಿಸಬಹುದಾಗಿದ್ದರೆ, ಕಂಪನಿಯ ಅಂಥ ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಇತರೇ ಅಧಿಕಾರಿಯನ್ನು ಅಪರಾಧದ ತಪ್ಪಿತಸ್ಥನೆಂದು ಭಾವಿಸತಕ್ಕದ್ದು ಮತ್ತು ಅವರ ವಿರುದ್ಧ ವ್ಯವಹರಣೆ ನಡೆಸತಕ್ಕದ್ದು ಹಾಗೂ ಅದರಂತೆ ದಂಡಿಸತಕ್ಕದ್ದು.

**ವಿವರಣೆ:**– ಈ ಪ್ರಕರಣದ ಉದ್ದೇಶಗಳಿಗಾಗಿ,–

(ಎ) "ಕಂಪನಿ" ಎಂದರೆ, ನಿಗಮಿತ ನಿಕಾಯ, ಇದು ಒಂದು ಫರ್ಮ್ ಅಥವಾ ವ್ಯಕ್ತಿಗಳ ಇತರ ಸಂಘವನ್ನು ಒಳಗೊಳ್ಳುತ್ತದೆ ; ಮತ್ತು

(ಬಿ) ಫರ್ಮ್‌ಗೆ ಸಂಬಂಧಿಸಿದಂತೆ "ನಿರ್ದೇಶಕರು" ಎಂದರೆ, ಫರ್ಮ್‌ನ ಪಾಲುದಾರ.

## ಅಧ್ಯಾಯ – XI

### ಸಂಕೀರ್ಣ

**105. ರಾಜ್ಯ ಬಂದರುಗಳ ಸಮಾಲೋಚನಾ ಸಮಿತಿಯ ರಚನೆ.–** (1) ಸರ್ಕಾರವು, ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ, ಮಂಡಳಿಯ ಸದಸ್ಯರನ್ನು ಒಳಗೊಂಡ ರಾಜ್ಯ ಬಂದರುಗಳ ಸಮಾಲೋಚನಾ ಸಮಿತಿಯನ್ನು ರಚಿಸಬಹುದು ಮತ್ತು ಅವರಲ್ಲಿ ವಾಣಿಜ್ಯ ಮಂಡಳಿ, ಹಡಗು ಸಾಗಣೆ, ಜಲಸಾರಿಗೆ, ನೌಕೆಗಳು, ಸೀಮಾಶುಲ್ಕ, ರೈಲ್ವೆ, ರಸ್ತೆ ಸಾರಿಗೆ, ಕಾರ್ಮಿಕ, ಸಂಪರ್ಕ, ಮೀನುಗಾರಿಕೆ ಮತ್ತು ಕೈಗಾರಿಕಾ ಕ್ಷೇತ್ರಗಳ ಹಿತಾಸಕ್ತಿಯನ್ನು ಪ್ರತಿನಿಧಿಸುವಲ್ಲಿ ಸಮರ್ಥರಾದ ಬಂದರುಕಟ್ಟೆ ಇಂಜಿನಿಯರಿಂಗ್, ಜಲಮಾಪನ ಸಮೀಕ್ಷೆ, ಜಲ ಸಾರಿಗೆ ಸಂಶೋಧನಾ ಸಂಸ್ಥೆಗಳಲ್ಲಿ, ಮಾದರಿ ಅಧ್ಯಯನಗಳ ಬಂದರು ಬಳಕೆದಾರ ಸಂಘಗಳಲ್ಲಿ ಪರಿಣಿತರೆಂದು ಸರ್ಕಾರವು ಅಭಿಪ್ರಾಯ ಪಡುವ ವ್ಯಕ್ತಿಗಳ ಪೈಕಿಯಿಂದ, ಸರ್ಕಾರವು ನೇಮಿಸಬಹುದಾದ ಹತ್ತಕ್ಕೆ ಕಡಿಮೆಯಿಲ್ಲದ ಮತ್ತು ಇಪ್ಪತ್ತಕ್ಕೆ ಮೀರದಂತೆ, ಆದರೆ ಮೇಲೆ ನಮೂದಿಸಿದ ಪ್ರತಿಯೊಂದು ಕ್ಷೇತ್ರದ ಹಿತಾಸಕ್ತಿಯನ್ನು ಹೊಂದಿರುವ ಕನಿಷ್ಠ ಒಬ್ಬ ಸದಸ್ಯನು ಒಳಗೊಂಡಿರತಕ್ಕದ್ದು.

(2) ಮಂಡಳಿಯ ಅಧ್ಯಕ್ಷರು ಸಮಿತಿಯ ಅಧ್ಯಕ್ಷರೂ ಆಗಿರತಕ್ಕದ್ದು.

(3) ಸರ್ಕಾರವು ಈ ಸಂಬಂಧವಾಗಿ ನೇಮಿಸಬಹುದಾದಂತೆ, ಮಂಡಳಿಯ ಮುಖ್ಯಕಾರ್ಯನಿರ್ವಹಣಾಧಿಕಾರಿಯು ಸಮಿತಿಯ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸತಕ್ಕದ್ದು.

(4) ಹಾಗೆ ರಚಿಸಿದ ಸಮಿತಿಯ ಪ್ರಕಾರ್ಯಗಳು ಈ ಮುಂದಿನಂತೆ ಇರತಕ್ಕದ್ದು:–

(ಎ) ಬಂದರುಗಳು, ಒಳನಾಡುಜಲಸಾರಿಗೆ ಮತ್ತು ಫೆರ್‍ರಿಗಳು ಹಾಗೂ ಕರಾವಳಿ ರಕ್ಷಣೆಗೆ ಸಂಬಂಧಿಸಿದ ಎಲ್ಲಾ ಸಾಮಾನ್ಯ ವಿಷಯಗಳಲ್ಲಿ ಮಂಡಳಿಗೆ ಸಲಹೆ ನೀಡುವುದು ;

(ಬಿ) ಯಾವುದೇ ಬಂದರುಗಳ, ಒಳನಾಡು ಜಲಸಾರಿಗೆ ಮತ್ತು ಫೆರ್‍ರಿಗಳು ಹಾಗೂ ಕರಾವಳಿ ರಕ್ಷಣೆಯ ಅಭಿವೃದ್ಧಿ ಕುರಿತಾದ ಯಾವುದೇ ಯೋಜನೆಗಳ ಸಂಬಂಧದಲ್ಲಿ ಮಂಡಳಿಗೆ ಸಲಹೆ ನೀಡುವುದು ;

(ಸಿ) ಬಂದರುಗಳ, ಒಳನಾಡುಜಲಸಾರಿಗೆ ಮತ್ತು ಫೆರ್ರಿಗಳು ಹಾಗೂ ಕರಾವಳಿ ರಕ್ಷಣೆಯ ಆಡಳಿತವನ್ನು ಪುನರೀಕ್ಷಿಸುವುದು ಮತ್ತು ಅವುಗಳ ಕೆಲಸದ ಸುಧಾರಣೆಗಾಗಿ ಮಾರ್ಗೋಪಾಯಗಳನ್ನು ಸೂಚಿಸುವುದು ;

(ಡಿ) ಬಂದರುಗಳ, ಒಳನಾಡುಜಲಸಾರಿಗೆಯ ಮತ್ತು ಫೆರ್ರಿಗಳು ಹಾಗೂ ಕರಾವಳಿ ರಕ್ಷಣೆಯ ಆಡಳಿತದಲ್ಲಿ ಮಂಡಳಿಯು ಎದುರಿಸಿದ ಯಾವುವೇ ತೊಂದರೆಗಳ ನಿವಾರಣೆಗೆ ಮಾರ್ಗೋಪಾಯಗಳನ್ನು ಸೂಚಿಸುವುದು ;

(ಇ) ಬಂದರುಗಳ ಒಳನಾಡುಜಲಸಾರಿಗೆಯ ಮತ್ತು ಫೆರ್ರಿಗಳು ಹಾಗೂ ಕರಾವಳಿ ರಕ್ಷಣೆಯ ಆಡಳಿತಕ್ಕೆ ಸಂಬಂಧಿಸಿದ ಯಾವುದೇ ವಿಷಯಗಳ ಕುರಿತು ಮಂಡಳಿಗೆ ಸ್ವಪ್ರೇರಣೆಯಿಂದ ಶಿಫಾರಸ್ಸುಗಳನ್ನು ಮಾಡುವುದು ;

(ಎಫ್) ಅಂಥ ವಿಷಯಗಳ ಮೇಲೆ, ಸರ್ಕಾರವು ಅಥವಾ ಮಂಡಳಿಯು ತನ್ನ ಅಭಿಪ್ರಾಯವನ್ನು ಕೋರಿದಾಗ, ಸಂದರ್ಭಾನುಸಾರವಾಗಿ ಸರ್ಕಾರಕ್ಕೆ ಅಥವಾ ಮಂಡಳಿಗೆ ತನ್ನ ವರದಿಯನ್ನು ನೀಡುವುದು.

(5) ಸರ್ಕಾರವು, ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ,–

(ಎ) ಸಮಿತಿಯ ಸಭೆಗಳನ್ನು ಕರೆಯುವ ಮತ್ತು ಸಭೆಗಳ ಕಾರ್ಯವಿಧಾನದ ಬಗ್ಗೆ ;

(ಬಿ) ಸಮಿತಿಯ ಕಾರ್ಯದರ್ಶಿಯ ಕರ್ತವ್ಯಗಳ ಬಗ್ಗೆ;

(ಸಿ) ಮೇಲೆ ನಮೂದಿಸಿದ ಹಿತಾಸಕ್ತಿಗಳನ್ನು ಪ್ರತಿನಿಧಿಸುವುದಕ್ಕಾಗಿ ಸಮಿತಿಯ ಸದಸ್ಯರಾಗಿ ನೇಮಕಗೊಂಡ ವ್ಯಕ್ತಿಗಳ ಪದಾವಧಿ, ಸಮಿತಿಯ ಸದಸ್ಯರ ಪ್ರವಾಸ ಭತ್ಯೆ ಮತ್ತು ದಿನ ಭತ್ಯೆ ಮತ್ತು ಅವುಗಳ ದರಗಳ ಬಗ್ಗೆ,

– ಉಪಬಂಧ ಕಲ್ಪಿಸತಕ್ಕದ್ದು.

(6) ಮೇಲೆ ನಮೂದಿಸಿದ ಹಿತಾಸಕ್ತಿಗಳನ್ನು ಪ್ರತಿನಿಧಿಸುವುದಕ್ಕಾಗಿ ಸಮಿತಿಯ ಸದಸ್ಯರಾಗಿ ನೇಮಕಗೊಂಡ ಯಾವೊಬ್ಬ ವ್ಯಕ್ತಿಯು, ಅಧ್ಯಕ್ಷರಿಗೆ ಲಿಖಿತದ ಮೂಲಕ ತನ್ನ ಸದಸ್ಯತ್ವಕ್ಕೆ ರಾಜೀನಾಮೆಯನ್ನು ಸಲ್ಲಿಸಬಹುದು ಮತ್ತು ಅಧ್ಯಕ್ಷರು ಅದನ್ನು ಸ್ವೀಕರಿಸಿದ ದಿನಾಂಕದಿಂದ ಜಾರಿಗೆ ಬರತಕ್ಕದ್ದು, ಅವರು ಖಾಲಿ ಸ್ಥಾನದ ಬಗ್ಗೆ ಸರ್ಕಾರಕ್ಕೆ ಮಾಹಿತಿಯನ್ನು ನೀಡತಕ್ಕದ್ದು.

**106. ಸ್ಥಳೀಯ ಸಲಹಾಸಮಿತಿ.–** (1) ರಾಜ್ಯ ಸರ್ಕಾರವು, ಕಾಲಕಾಲಕ್ಕೆ, ಅಂಥ ಬಂದರುಗಳಿಗೆ ತಾನು ನಿಯಮಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಪ್ರತಿ ಪ್ರಕರಣದಲ್ಲಿ ತಾನು ಸೂಕ್ತವೆಂದು ಭಾವಿಸಬಹುದಾದ ಸಂಖ್ಯೆಯ ವ್ಯಕ್ತಿಗಳನ್ನು ಒಳಗೊಂಡ ಸ್ಥಳೀಯ ಸಲಹಾ ಸಮಿತಿಗಳನ್ನು ರಚಿಸತಕ್ಕದ್ದು.

(2) ಮಂಡಳಿಯು, ಅದು ಸೂಕ್ತವೆಂದು ಭಾವಿಸುವುದಾದರೆ, ತನ್ನ ಮುಂದೆ ಬರುವ ಯಾವುದೇ ವ್ಯವಹಾರಗಳ ವಿಷಯಕ್ಕೆ ಸಂಬಂಧಿಸಿದ ಸ್ಥಳೀಯ ಸಲಹಾ ಸಮಿತಿಯ ಜೊತೆ ಸಮಾಲೋಚಿಸಬಹುದು ಮತ್ತು ಸರ್ಕಾರವು ಅಂಥ ವ್ಯವಹಾರಕ್ಕೆ ಸಂಬಂಧಿಸಿದಂತೆ, ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ಈ ಬಗ್ಗೆ ನಿರ್ದಿಷ್ಟಪಡಿಸಿದಾಗ ಅಥವಾ ವಿನಿಯಮಗಳ ಮೂಲಕ ಆ ರೀತಿ ಮಾಡಲು ಅಗತ್ಯಪಡಿಸಿದಾಗ ಹಾಗೆ ಮಾಡತಕ್ಕದ್ದು.

(3) ಸಂಬಂಧಪಟ್ಟ ಬಂದರು ಅಧಿಕಾರಿಯು, ಸ್ಥಳೀಯ ಸಲಹಾ ಸಮಿತಿಯ ಪದನಿಮಿತ್ತ ಅಧ್ಯಕ್ಷರಾಗಿರತಕ್ಕದ್ದು.

(4) ಸ್ಥಳೀಯ ಸಲಹಾ ಸಮಿತಿಯು ನಿರ್ದಿಷ್ಟಪಡಿಸಬಹುದಾದಂಥ ಅವಧಿಯ ಅಂತರದಲ್ಲಿ ಮತ್ತು ತುರ್ತು ವ್ಯವಹಾರದ ನಿರ್ವಹಣೆಗಾಗಿ ಮಂಡಳಿಯ ಅಧ್ಯಕ್ಷನು ಬಯಸಬಹುದಾದ ಅಂಥ ಇತರ ಸಂದರ್ಭದಲ್ಲಿ ಸಭೆ ಸೇರತಕ್ಕದ್ದು.

(5) ಸರ್ಕಾರವು ಸಮಿತಿಯ ರಚನೆಯ ಕಾಲದಲ್ಲಿ ನಿರ್ದಿಷ್ಟ ಪಡಿಸಬಹುದಾದಂತೆ ಸ್ಥಳೀಯ ಸಲಹಾ ಸಮಿತಿಯ ಸಭೆಯ ಕೋರಂಗಾಗಿ ಅವಶ್ಯವಾದ ಸದಸ್ಯರ ಸಂಖ್ಯೆಯು ಇರತಕ್ಕದ್ದು.

**107. ಈ ಅಧಿನಿಯಮದ ಅಡಿಯಲ್ಲಿ ಕೈಗೊಂಡ ಕಾರ್ಯಗಳ ಸಂಬಂಧದಲ್ಲಿ ನಡವಳಿಗಳ ಪರಿಮಿತಿ.–** ಈ ಅಧಿನಿಯಮದ ಅನುಸರಣೆಯಲ್ಲಿ ಕೈಗೊಂಡ ಯಾವುದೇ ಕಾರ್ಯ ಅಥವಾ ಕೈಗೊಳ್ಳಲಾಗಿದೆ ಎಂದು ತಾತ್ಪರ್ಯವಾಗುವ ಕಾರ್ಯಗಳಿಗಾಗಿ, ಮಂಡಳಿಗೆ ಅಥವಾ ಆತನಿಗೆ, ವ್ಯಾಜ್ಯ ಕಾರಣವನ್ನು ತಿಳಿಸಿ ಲಿಖಿತದಲ್ಲಿ ನೋಟೀಸನ್ನು ನೀಡಿದಂದಿನಿಂದ ಒಂದು ತಿಂಗಳ ಅವಧಿಯು ಮುಕ್ತಾಯವಾಗುವವರೆಗೆ, ಅಥವಾ ವ್ಯಾಜ್ಯ ಕಾರಣವು ಪ್ರಾಪ್ತಿಯಾದ ಆರು ತಿಂಗಳ ತರುವಾಯ ಮಂಡಳಿಯ ಅಥವಾ ಯಾವೊಬ್ಬ ಸದಸ್ಯ ಅಧಿಕಾರಿ ಅಥವಾ ಅದರ ನೌಕರರ ವಿರುದ್ಧ ಯಾವುದೇ ದಾವೆ ಅಥವಾ ವ್ಯವಹರಣೆಯನ್ನು ಪ್ರಾರಂಭಿಸತಕ್ಕದ್ದಲ್ಲ.

**108. ಸದ್ಭಾವನೆಯಿಂದ ಮಾಡಲಾದ ಕೃತ್ಯಗಳಿಗೆ ರಕ್ಷಣೆ.–** ಮಂಡಳಿ ಅಥವಾ ಯಾವುದೇ ಸದಸ್ಯ ಅಥವಾ ಅದರ ನೌಕರನ ವಿರುದ್ಧ, ಈ ಅಧಿನಿಯಮದ ಅಥವಾ ಅದರಡಿ ರಚಿಸಲಾದ ನಿಯಮದ ಅಥವಾ ವಿನಿಯಮದ ಅಡಿಯಲ್ಲಿ, ಸದ್ಭಾವನೆಯಿಂದ ಮಾಡಲಾದ ಅಥವಾ ಮಾಡಲು

ಉದ್ದೇಶಿಸಲಾದ ಯಾವುದರ ಬಗ್ಗೆಯೂ, ಅಥವಾ ಯಾವುದೇ ದೋಷಪೂರಿತ ಸ್ಥಾಯಿ ಲಂಗರುಗಳು, ಹಡಗಿನ ದೊಡ್ಡ ಹಗ್ಗ (ಹಾಸರ್ಸ್) ಅಥವಾ ಮಂಡಲಿಗೆ ಸೇರಿದ ಇತರ ವಸ್ತುಗಳಿಂದಾಗಿ ನೌಕೆಯಿಂದ ಉಂಟಾಗಿದೆಯೆಂದು ಭಾವಿಸಲಾದ ಯಾವುದೇ ಹಾನಿಗಾಗಿ ಯಾವುದೇ ಕಾನೂನು ವ್ಯವಹರಣೆಗಳಿಗೆ ಅವಕಾಶವಿರತಕ್ಕದ್ದಲ್ಲ.

**109. ನಿಯಮಗಳನ್ನು ರಚಿಸಲು ಸರ್ಕಾರದ ಅಧಿಕಾರ.–** (1) ಸರ್ಕಾರವು, ಅಧಿಸೂಚನೆಯ ಮೂಲಕ, ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸಲು ನಿಯಮಗಳನ್ನು ರಚಿಸಬಹುದು.

(2) ವಿಶೇಷವಾಗಿ ಮತ್ತು ಹಿಂದೆ ಹೇಳಿದ ಅಧಿಕಾರಗಳಿಗೆ ಪ್ರತಿಕೂಲವಲ್ಲದ ರೀತಿಯಲ್ಲಿ, ಈ ಮುಂದಿನ ಯಾವುದೇ ಅಥವಾ ಎಲ್ಲಾ ವಿಷಯಗಳ ಬಗ್ಗೆ ಅಂಥ ನಿಯಮಗಳನ್ನು ರಚಿಸಬಹುದು, ಎಂದರೆ:–

(ಎ) 12ನೇ ಪ್ರಕರಣದ ಅಡಿಯಲ್ಲಿ ಮಂಡಳಿಯ ಯಾವುದೇ ಕೆಲಸವನ್ನು ಕೈಗೊಂಡಿದ್ದಕ್ಕಾಗಿ ಅಥವಾ ಅದರ ಸಮಿತಿಯ ಅಥವಾ ಮಂಡಳಿಯ ಸಭೆಗಳಿಗೆ ಹಾಜರಾಗಿದ್ದಕ್ಕಾಗಿ ಅಥವಾ ಅದರ ಯಾವುದೇ ಸಮಿತಿಯ ಅಥವಾ ಮಂಡಳಿಯ ಸದಸ್ಯರಿಗೆ ಫೀಜುಗಳು ಮತ್ತು ಭತ್ಯೆಗಳ ಸಂದಾಯದ ಬಗ್ಗೆ;

(ಬಿ) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ಸೇವಾ ನಿಬಂಧನೆಗಳು ಮತ್ತು ಷರತ್ತುಗಳ ಬಗ್ಗೆ;

(ಸಿ) ಮಂಡಳಿಯ ಸಿಬ್ಬಂದಿಯ ಇತರ ಸದಸ್ಯರನ್ನು ನೇಮಕ ಮಾಡಿಕೊಳ್ಳುವ ಸಕ್ಷಮ ಪ್ರಾಧಿಕಾರದ ಬಗ್ಗೆ ;

(ಡಿ) ಮಂಡಳಿಯ ಸಿಬ್ಬಂದಿಯ ಇತರ ಸದಸ್ಯರ ನೇಮಕಾತಿ, ಪರಿಶ್ರಮಧನ ಮತ್ತು ಭತ್ಯೆ ಹಾಗು ಶಿಸ್ತಿನ ವಿಷಯವು ಒಳಗೊಂಡಂತೆ ಇತರ ಸೇವಾ ಷರತ್ತುಗಳ ಬಗ್ಗೆ;

(ಇ) 24ನೇ ಪ್ರಕರಣದ ಅಡಿಯಲ್ಲಿ ಕರಾರುಗಳನ್ನು ಮಾಡಿಕೊಳ್ಳುವ ವಿಧಾನದ ಬಗ್ಗೆ ;

(ಎಫ್) 36ನೇ ಪ್ರಕರಣದ (3)ನೇ ಉಪಪ್ರಕರಣದ ಅಡಿಯಲ್ಲಿ ನ್ಯಾಯೋಚಿತ ಮತ್ತು ಸೂಕ್ತ ಪರಿಹಾರವನ್ನು ನಿರ್ಧರಿಸಲು ಪರಿಗಣಿಸಬೇಕಾದ ಅಂಶಗಳ ಬಗ್ಗೆ ;

(ಜಿ) 106ನೇ ಪ್ರಕರಣದ (1)ನೇ ಉಪಪ್ರಕರಣದ ಅಡಿಯಲ್ಲಿ ಸ್ಥಳೀಯ ಸಲಹಾ ಸಮಿತಿಯ ಸದಸ್ಯನನ್ನಾಗಿ ಒಬ್ಬ ವ್ಯಕ್ತಿಯನ್ನು ನೇಮಿಸುವ ನಿಬಂಧನೆ ಮತ್ತು ಷರತ್ತುಗಳ ಬಗ್ಗೆ ;

(ಹೆಚ್) ಸರ್ಕಾರದ ಪೂರ್ವ ಮಂಜೂರಾತಿಯೊಡನೆ, 54ನೇ ಪ್ರಕರಣದ (1)ನೇ ಉಪಪ್ರಕರಣದಡಿಯಲ್ಲಿ ಸಾಲವನ್ನು ಎತ್ತಬಹುದಾದುದಕ್ಕೆ ಇರುವ ನಿಬಂಧನೆಗಳು ಮತ್ತು ಷರತ್ತುಗಳ ಬಗ್ಗೆ;

(ಐ) ಈ ಅಧಿನಿಯಮದಡಿಯಲ್ಲಿ ರಚಿಸಲ್ಪಡುವ ಎಲ್ಲಾ ನಿಯಮಗಳು ಪೂರ್ವ ಪ್ರಕಟಣೆಯ ಷರತ್ತಿಗೊಳಪಟ್ಟಿರತಕ್ಕದ್ದು:

ಪರಂತು, ತಕ್ಷಣವೇ ಕ್ರಮಕೈಗೊಳ್ಳುವುದು ಅವಶ್ಯಕವೆಂಬ ಸಂದರ್ಭಗಳು ಉಂಟಾಗಿವೆ ಎಂದು ಸರ್ಕಾರವು ಮನಗಂಡರೆ, ಈ ಪ್ರಕರಣದಡಿಯಲ್ಲಿ ರಚಿಸಬೇಕಾದ ಯಾವುದೇ ನಿಯಮದ ಪೂರ್ವ ಪ್ರಕಟಣೆಯನ್ನು ವಿನಾಯಿತಿಗೊಳಿಸಬಹುದು;

(ಜೆ) ನಿಯಮಗಳ ಮೂಲಕ ನಿಯಮಿಸಲಾದ ಅಥವಾ ನಿಯಮಿಸಬಹುದಾದ ಇತರ ಯಾವುದೇ ವಿಷಯದ ಬಗ್ಗೆ.

(3) ಈ ಅಧಿನಿಯಮದ ಅಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ ಆದಷ್ಟು ಬೇಗನೆ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚು ನಿರಂತರ ಅಧಿವೇಶನಗಳಲ್ಲಿ ಅಡಕವಾಗಿರಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಅದು ಅಧಿವೇಶನದಲ್ಲಿರುವಾಗ ಮಂಡಿಸತಕ್ಕದ್ದು ಮತ್ತು ಮೇಲೆ ಹೇಳಿದ ಅಧಿವೇಶನ ಅಥವಾ ನಿರಂತರ ಅಧಿವೇಶನಗಳ ನಿಕಟ ತರುವಾಯದ ಅಧಿವೇಶನವು ಮುಕ್ತಾಯವಾಗುವುದಕ್ಕೆ ಮೊದಲು ರಾಜ್ಯ ವಿಧಾನಮಂಡಲದ ಎರಡೂ ಸದನಗಳು ನಿಯಮದಲ್ಲಿ ಯಾವುದೇ ಮಾರ್ಪಾಡು ಮಾಡಲು ಒಪ್ಪಿದರೆ, ಅಥವಾ ಆ ನಿಯಮವನ್ನು ರಚಿಸತಕ್ಕದ್ದಲ್ಲವೆಂದು ಒಪ್ಪಿದರೆ ತದನಂತರ ಅಂಥ ನಿಯಮವು ಸಂದರ್ಭಾನುಸಾರ ಹಾಗೆ ಮಾರ್ಪಾಟಾದ ರೀತಿಯಲ್ಲಿ ಪರಿಣಾಮಕಾರಿಯಾಗತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಯಾವುದೇ ಅಂಥ ಮಾರ್ಪಾಡು ಅಥವಾ ರದ್ಧತಿಯು ಈ ನಿಯಮದ ಅಡಿಯಲ್ಲಿ ಈ ಮೊದಲು ಮಾಡಲಾದ ಯಾವುದೇ ಕಾರ್ಯದ ಮಾನ್ಯತೆಗೆ ಬಾಧೆ ಉಂಟುಮಾಡತಕ್ಕದ್ದಲ್ಲ.

**110. ವಿನಿಯಮಗಳ ಸಾಮಾನ್ಯ ರಚನಾಧಿಕಾರ.–** ಮಂಡಳಿಯು, ಸರ್ಕಾರದ ಪೂರ್ವಾನುಮೋದನೆಯೊಡನೆ ಈ ಅಧಿನಿಯಮ ಮತ್ತು ನಿಯಮಗಳಿಗೆ ಅಸಂಗತವಲ್ಲದಂತೆ ಈ ಮುಂದಿನ ಎಲ್ಲಾ ಅಥವಾ ಯಾವುದೇ ವಿಷಯಗಳ ಬಗ್ಗೆ ವಿನಿಯಮಗಳನ್ನು ರಚಿಸಬಹುದು, ಎಂದರೆ :–

(1) ಮಂಡಲಿ ಅಥವಾ ಅದರ ಸಮಿತಿಗಳ ಸಭೆಗಳನ್ನು ನಡೆಸುವ ವೇಳೆ ಮತ್ತು ಸ್ಥಳಗಳು, ಅಂಥ ಸಭೆಗಳಲ್ಲಿಯ ಕಾರ್ಯನಿರ್ವಹಣೆಯಲ್ಲಿ ಅನುಸರಿಸಬೇಕಾದ ಕ್ರಮಗಳು ಮತ್ತು ಅಂಥ ಸಭೆಗಳಲ್ಲಿ ಕೋರಂಗಾಗಿ ಅವಶ್ಯವಾದ ಸದಸ್ಯರ ಸಂಖ್ಯೆ ;

(2) 32ನೇ ಪ್ರಕರಣದ (2)ನೇ ಉಪಪ್ರಕರಣದ ಅಡಿಯಲ್ಲಿ ನೀಡಬೇಕಾದ ಸ್ವೀಕೃತ ನಮೂನೆ;

(3) 33ನೇ ಪ್ರಕರಣದ (2)ನೇ ಉಪಪ್ರಕರಣದ ಅಡಿಯಲ್ಲಿ ನೋಟೀಸನ್ನು ನೀಡಬಹುದಾದ ಅವಧಿ ;

(4) ಈ ಅಧಿನಿಯಮದ ಅಡಿಯಲ್ಲಿ ಮಂಡಳಿಯಿಂದ ನಿಯೋಜಿತರಾದ ವ್ಯಕ್ತಿಗಳ ಮಾರ್ಗದರ್ಶನ;

(5) ಈ ಅಧಿನಿಯಮದ ಅಡಿಯಲ್ಲಿ ಮಂಡಳಿಯು ಆರ್ಜಿಸಿದ ಅಥವಾ ಅದರಲ್ಲಿ ನಿಹಿತವಾದ ಹಡಗುಕಟ್ಟೆಗಳು, ಸರಕು ಕಟ್ಟೆಗಳು, ಬಂದರುಕಟ್ಟೆಗಳು, ಬಂದರು ಕಾಪುಗಳು, ಕಟ್ಟಡಗಳು ಮತ್ತು ಇತರೆ ನಿರ್ಮಾಣ ಕಾಮಗಾರಿಗಳ ಅಥವಾ ಮಂಡಲಿಯು ಆರ್ಜಿಸಿದ ಅಥವಾ ಅದರಲ್ಲಿ ನಿಹಿತವಾದ ಯಾವುದೇ ಭೂಮಿ ಅಥವಾ ಮುಂಗರೆಯ ಸುರಕ್ಷಿತ ಪರಿಣಾಮಕಾರಿ ಹಾಗೂ ಅನುಕೂಲಕರ ಉಪಯೋಗ, ನಿರ್ವಹಣೆ ಮತ್ತು ನಿಯಂತ್ರಣ;

(6) ಮಂಡಳಿ ಅಥವಾ ಮಂಡಳಿಯು ನಿಯೋಜಿಸಿದ ವ್ಯಕ್ತಿಗಳು ಮಂಡಳಿಯ ಆವರಣಗಳೊಳಗೆ ತರಲಾದ ಸರಕುಗಳ ಸ್ವೀಕಾರ, ಸರಕು ಸಾಗಣೆ, ಸಂಗ್ರಹಣೆ ಮತ್ತು ಸಾಗಿಸುವ ಕಾರ್ಯಾಚರಣೆಗಳನ್ನು ನಡೆಸುವುದಕ್ಕಾಗಿ ಹಾಗೂ ಸರಕುಗಳನ್ನು ಇಳಿಸುವ ಮುನ್ನ ಆಗಿರಬಹುದಾದ ಹಾನಿ ಅಥವಾ ಹಾಗೆ ಹಾನಿಯಾಗಿವೆಯೆಂದು ಆಪಾದಿಸಬಹುದಾದ ಸರಕುಗಳನ್ನು ವಶಕ್ಕೆ ತೆಗೆದುಕೊಳ್ಳುವಾಗ ಅನುಸರಿಸಬೇಕಾದ ಕ್ರಮಗಳ ಘೋಷಣೆ ;

(7) ಬಂದರು, ನದಿ ಅಥವಾ ಕಣಿವೆ ಅಥವಾ ನದಿ ದಂಡೆ ಇವುಗಳ ಸ್ವಚ್ಛತೆ ಮತ್ತು ಮಂಡಳಿಯ ಕಾಮಗಾರಿಗಳು, ಹಾಗೂ ಕಲ್ಮಷ ಅಥವಾ ಕಸವನ್ನು ಅವುಗಳಲ್ಲಿ ಅಥವಾ ಅವುಗಳ ಮೇಲೆ ಎಸೆಯುವುದರಿಂದ ರಕ್ಷಿಸುವುದು ;

(8) ಈ ಅಧಿನಿಯಮದ ಅಡಿಯಲ್ಲಿ ಮಂಡಳಿಯಿಂದ ಪಾವತಿಸಬೇಕಾದ ದರಗಳ ನೀಡಿಕೆಯ ವಿಧಾನ ;

(9) ಸರಕುಗಳನ್ನು ನೌಕೆಗಳಿಂದ ಇಳಿಸಲು ಹಾಗೂ ಮಂಡಳಿಯ ನೌಕೆಗಳಲ್ಲಿ ತುಂಬಿಸಲು ಉಪಯೋಗಿಸುವ, ಮಂಡಳಿಯಲ್ಲಿ ನಿಹಿತವಾದ ಹಡಗುಕಟ್ಟೆಗಳು, ಸರಕುಕಟ್ಟೆಗಳು, ಬಂದರುಕಟ್ಟೆಗಳು, ಬಂದರು ಕಾಪುಗಳು, ಸ್ಟೇಜುಗಳು ಮತ್ತು ಹಡಗು ಇಳಿದಾಣಗಳನ್ನು ನಿಯಂತ್ರಿಸುವುದು, ಘೋಷಿಸುವುದು ಮತ್ತು ಸ್ಪಷ್ಟಪಡಿಸುವುದು;

(10) ಬಂದರು ಸಂಪರ್ಕಗಳು ಅಥವಾ ಬಂದರುಗಳಲ್ಲಿ ಎಲ್ಲಾ ನೌಕೆಗಳಲ್ಲಿ ಸರಕುಗಳನ್ನು ಏರಿಸುವ ಮತ್ತು ಇಳಿಸುವ ಷರತ್ತುಗಳು ಮತ್ತು ಪದ್ಧತಿಗಳ ನಿಯಂತ್ರಣಗಳನ್ನು ನಿರ್ವಹಿಸುವುದು ;

(11) ಹಡಗುಗಳ ಮಧ್ಯೆ ಅಥವಾ ಹಡಗುಗಳ ಮತ್ತು ಕಡಲ ತೀರದ ಮಧ್ಯೆ ಅಥವಾ ಕಡಲ ತೀರ ಮತ್ತು ಹಡಗುಗಳ ಮಧ್ಯೆ ಸರಕುಗಳ ಸಾಗಣೆಯ ರುಸುಮಿನ ನಿಯಂತ್ರಣ;

(12) ಅಕ್ರಮ ಅಥವಾ ಇತರೇ ಅನಪೇಕ್ಷಿತ ವ್ಯಕ್ತಿಗಳು ಮತ್ತು ಅತಿಕ್ರಮಣಕಾರದಿಂದ ಮಂಡಳಿಯ ಸರಹದ್ದನ್ನು ಮುಕ್ತಗೊಳಿಸುವುದು ;

(13) ಬಂದರಿನ ಸುರಕ್ಷತೆಯನ್ನು ಖಚಿತಪಡಿಸಿಕೊಳ್ಳುವುದು ;

(14) ಸಾಮಾನ್ಯವಾಗಿ ಬಂದರುಗಳ ದಕ್ಷ ಹಾಗೂ ಸೂಕ್ತ ಆಡಳಿತ ನಿರ್ವಹಣೆ ;

(15) ಮಂಡಳಿಯು ಹೊರಡಿಸಿದ ಅಥವಾ ಹೊರಡಿಸುವ, ಮಂಡಳಿಗೆ ಸಂಬಂಧಿಸಿದ ದಾಖಲೆಗಳ ಭದ್ರತೆಗಳಿಗೆ ಸಹಿ ಮಾಡಲು ಮತ್ತು ನಿಗಮಿತ ಮೊಹರನ್ನು ಹಾಕಲು ಹಾಗೂ ದೃಢೀಕರಿಸಲು ಯಾವೊಬ್ಬ ವ್ಯಕ್ತಿಯನ್ನು ಅಧಿಕೃತಗೊಳಿಸಿದ್ದರೆ, ಆ ವ್ಯಕ್ತಿ;

(16) ಮಂಡಳಿಯ ಅಂಥ ಭದ್ರತೆಯ ಸಂಬಂಧದಲ್ಲಿ ಬಡ್ಡಿ ಸಂದಾಯವನ್ನು ದಾಖಲಿಸುವ ಮತ್ತು ಸ್ವೀಕೃತಿ ನೀಡುವ ವಿಧಾನ ;

(17) ಮಂಡಳಿಯ ಭದ್ರತೆಗಳನ್ನು ನವೀಕರಿಸುವ ಸಂದರ್ಭಗಳು ಮತ್ತು ವಿಧಾನ ;

(18) ಅಂಥ ಭದ್ರತೆಗಳನ್ನು, ಅದರ ಮೇಲಿನ ಹೆಚ್ಚಿನ ಬಡ್ಡಿಯ ಸಂದಾಯವನ್ನು ಕ್ಲೇಮು ಮಾಡುವುದಕ್ಕೆ ಮೊದಲು ನವೀಕರಿಸತಕ್ಕ ಸಂದರ್ಭ;

(19) ಅಂಥ ಭದ್ರತೆಗಳ ನವೀಕರಣ, ಪರಿವರ್ತನೆ, ಒಟ್ಟುಗೂಡಿಸುವಿಕೆ ಅಥವಾ ಉಪ ವಿಭಾಗ ಮಾಡುವುದಕ್ಕಾಗಿ ರಸೀದಿ ನೀಡಬೇಕಾದ ಸ್ವೀಕೃತಿಯ ನಮೂನೆ ;

(20) ಭದ್ರತೆಗಳ ನಕಲು ಪ್ರತಿಗಾಗಿ ಅರ್ಜಿ ಸಲ್ಲಿಸುವ ಒಬ್ಬ ವ್ಯಕ್ತಿಯು ಒದಗಿಸಬೇಕಾದ ರುಜುವಾತು;

ಕರ್ನಾಟಕ ಅರಣ್ಯ ಅಧಿನಿಯಮ, 1963ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಅರಣ್ಯ ಅಧಿನಿಯಮ, 1963ನ್ನು (1964ರ ಕರ್ನಾಟಕ ಅಧಿನಿಯಮ ಸಂಖ್ಯೆ 5) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ ;

ಇದು ಭಾರತ ಗಣರಾಜ್ಯದ ಅರವತ್ತೆರಡನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ ;

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಅರಣ್ಯ (ತಿದ್ದುಪಡಿ) ಅಧಿನಿಯಮ, 2011 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 73ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಅರಣ್ಯ ಅಧಿನಿಯಮ, 1963ರ (1964ರ ಕರ್ನಾಟಕ ಅಧಿನಿಯಮ ಸಂಖ್ಯೆ 5) 73ನೇ ಪ್ರಕರಣದಲ್ಲಿ (ಡಿ)ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ :–

"(ಡಿ) ರಾಜ್ಯ ಅಥವಾ ಸಂದರ್ಭಾನುಸಾರವಾಗಿ ಕೇಂದ್ರ ಸರ್ಕಾರದ ಪ್ರಾಧಿಕಾರದಿಂದ ಅಥವಾ ಅದರಡಿಯಲ್ಲಿ ಹಾಗೆ ಇಡಲಾದ ಶಿಖರದ ತುದಿಗಳು, ದೊಡ್ಡ ತ್ರಿಕೋನ ಮಿತಿಗಳು, ಕಂದಾಯ ಬಾಂದುಗಳು, ಕಲ್ಲುಗುಡ್ಡೆಗಳು, ಸರಹದ್ದು ಕಲ್ಲುಗಳು ಅಥವಾ ನಿಯಮಿಸಬಹುದಾದ ಅಂಥ ಇತರ ಗುರುತುಗಳು ಒಳಗೊಂಡಂತೆ, ಈ ಅಧಿನಿಯಮದ ಉಪಬಂಧಗಳು ಅನ್ವಯವಾಗುವ ಯಾವುದೇ ಅರಣ್ಯದ ಅಥವಾ ಬಂಜರು ಭೂಮಿಯ ಯಾವುದೇ ಸರಹದ್ದು ಗುರುತುಗಳು ಅಥವಾ ಶಾಶ್ವತ ಉಲ್ಲೇಖಿತ ಗುರುತುಗಳನ್ನು ಬದಲಾಯಿಸಿದರೆ, ಸರಿಸಿದರೆ, ನಾಶಗೊಳಿಸಿದರೆ ಅಥವಾ ವಿರೂಪಗೊಳಿಸಿದರೆ;"

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಅರಣ್ಯ ಪ್ರದೇಶಗಳಲ್ಲಿ ಕಾನೂನು ಬಾಹಿರ ಗಣಿಗಾರಿಕೆ ಚಟುವಟಿಕೆಗಳನ್ನು ನಿಯಂತ್ರಿಸುವುದಕ್ಕಾಗಿ ಸನ್ಮಾನ್ಯ ಕರ್ನಾಟಕ ಲೋಕಾಯುಕ್ತರು ಮಾಡಿರುವ ಶಿಫಾರಸ್ಸುಗಳ ಮೇರೆಗೆ ಕರ್ನಾಟಕ ಅರಣ್ಯ ಅಧಿನಿಯಮ, 1963ರ 73ನೇ ಪ್ರಕರಣವನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಪ್ರತ್ಯಾಯೋಜಿತ ಶಾಸನ ರಚನಾಧಿಕಾರ ಕುರಿತ ಜ್ಞಾಪನ ಪತ್ರ**

**ಖಂಡ 2:** 73ನೇ ಪ್ರಕರಣದ (ಡಿ) ಖಂಡವು, ಅರಣ್ಯದ ಸರಹದ್ದು ಗುರುತುಗಳನ್ನು ಮಾಡುವ ರೀತಿಗೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ಸಾಮಾನ್ಯ ಸ್ವರೂಪದ್ದಾಗಿದೆ.

**ಸಿ.ಪಿ. ಯೋಗೇಶ್ವರ**

ಅರಣ್ಯ ಸಚಿವರು

**ಪಿ. ಓಂಪ್ರಕಾಶ**

ಕಾರ್ಯದರ್ಶಿ

ಕರ್ನಾಟಕ ವಿಧಾನ ಸಭೆ

**ಅನುಬಂಧ**

**ಕರ್ನಾಟಕ ಅರಣ್ಯ ಅಧಿನಿಯಮ, 1963ರ (1964ರ ಕರ್ನಾಟಕ ಅಧಿನಿಯಮ 5)**

**ಉದ್ಧೃತ ಭಾಗ**

XX XX XX

**73. ಮರಗಳ ಅಥವಾ ಚೌಬೀನೆಯ ಮೇಲಿನ ಗುರುತುಗಳನ್ನು ಖೋಟಾಗೊಳಿಸುವ ಅಥವಾ ವಿರೂಪಗೊಳಿಸುವುದಕ್ಕಾಗಿ ಮತ್ತು ಸರಹದ್ದು ಗುರುತುಗಳನ್ನು ಬದಲಾಯಿಸುವುದಕ್ಕಾಗಿ ದಂಡ.–**

XX XX XX

(ಡಿ) ಈ ಅಧಿನಿಯಮದ ಉಪಬಂಧಗಳು ಅನ್ವಯವಾಗುವಂಥ ಯಾವುದೇ ಅರಣ್ಯ ಅಥವಾ ಬಂಜರು ಭೂಮಿಯ ಯಾವುದೇ ಸರಹದ್ದು ಗುರುತನ್ನು ಬದಲಾಯಿಸಿದರೆ, ಸರಿಸಿದರೆ, ನಾಶಗೊಳಿಸಿದರೆ ಅಥವಾ ವಿರೂಪಗೊಳಿಸದರೆ

– ದೋಷ ಸಿದ್ಧಿಯ ತರುವಾಯ, ಎರಡು ವರ್ಷಗಳವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ದಂಡನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

XX XX XX

# KARNATAKA LEGISLATIVE ASSEMBLY

## THIRTEENTH LEGISLATIVE ASSEMBLY

## ELEVENTH SESSION

## THE KARNATAKA FOREST (AMENDMENT) BILL, 2011

## (L.A. Bill No. 34 of 2011)

A Bill further to amend the Karnataka Forest Act, 1963.

Whereas it is expedient further to amend the Karnataka Forest Act, 1963 (Karnataka Act 5 of 1964), for the purposes hereinafter appearing;

Be it enacted by the Karnataka State Legislature in the Sixty second year of the Republic of India as follows:-

**1. Short title and commencement.-** (1) This Act may be called the Karnataka Forest (Amendment) Act, 2011.

(2) It shall come into force at once.

**2. Amendment of section 73.-** In section 73 of the Karnataka Forest Act, 1963 (Karnataka Act 5 of 1964), for clause (d), the following shall be substituted, namely:-

> "(d) alters, moves, destroys or defaces any boundary marks or permanent reference points of any forest or waste land to which the provisions of this Act are applicable including rock points, great trigonometric stations, revenue bundhs, kairns, boundary stones or such other marks as may be prescribed, so placed by or under the authority of the State or Central Government, as the case may be; "

### STATEMENT OF OBJECTS AND REASONS

It is considered necessary to amend section 73 of the Karnataka Forest Act, 1963 on the recommendations of the Hon'ble Karnataka Lokayukta to control the illegal mining activities in the forest areas.

Hence, the Bill.

### FINANCIAL MEMORANDUM

There is no extra expenditure involved in the proposed legislative measure.

**MEMORANDUM REGARDING DELEGATED LEGISLATION**

**Clause 2:** Clause (d) of section 73, empowers the State Government to make rules regarding the manner of making of boundary marks of Forest.

The proposed delegation of legislative power is normal in character

**C.P. YOGEESHWARA**
Minister for Forest

**P. OMPRAKASHA**
Secretary
Karnataka Legislative Assembly

**ANNEXURE**

**Extract from the Karnataka Forest Act, 1963 (Karnataka Act 5 of 1964)**

xx xx xx

**73. Penalty for counterfeiting or defacing marks on trees or timber and for altering boundary marks.—**

xx xx xx

(d) alters, moves, destroys or defaces any boundary mark of any forest or waste land to which the provisions of this Act are applicable; shall, on conviction, be punishable with imprisonment which may extend to two years, or with fine, or with both.

xx xx xx

**P. OMPRAKASHA**
Secretary
Karnataka Legislative Assembly

**ವಿಶೇಷ ಪತ್ರಿಕೆ**

| ಭಾಗ – **IV-A** | ಬೆಂಗಳೂರು, ಸೋಮವಾರ, ಡಿಸೆಂಬರ್ ೧೨, ೨೦೧೧ (ಮಾರ್ಗಶಿರ ೨೧, ಶಕ ವರ್ಷ ೧೯೩೩) | ನಂ. ೬೭೪ |
|---|---|---|

## KARNATAKA LEGISLATIVE ASSEMBLY SECRETARIAT

### NOTIFICATION

**No. KLA/LGA/37/Bill/2011, Bangalore, Dated: 12.12.2011**

The following Bill was introduced in Legislative Assembly on 12.12.2011.

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹನ್ನೊಂದನೇ ಅಧಿವೇಶನ**

## ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳ (ಕ್ರಷರ್‌ಗಳ) ನಿಯಂತ್ರಣ ವಿಧೇಯಕ, 2011

**(2011ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 38)**

ಕರ್ನಾಟಕ ರಾಜ್ಯದಲ್ಲಿ ಕಲ್ಲುಪುಡಿ ಮಾಡುವ ಘಟಕಗಳ ನಿಯಂತ್ರಣಕ್ಕಾಗಿ ಉಪಬಂಧ ಕಲ್ಪಿಸಲು ಒಂದು ವಿಧೇಯಕ.

ಮಾನ್ಯ ಉಚ್ಚ ನ್ಯಾಯಾಲಯವು, ರಿಟ್ ಅರ್ಜಿ ಸಂಖ್ಯೆ. 17078 / 1997ರಲ್ಲಿ ದಿನಾಂಕ: 10.7.1998ರ ತನ್ನ ಆದೇಶದ ಮೂಲಕ, ಕಲ್ಲುಪುಡಿ ಮಾಡುವ ವ್ಯವಹಾರ ನಡೆಸುವುದನ್ನು ನಿಯಂತ್ರಣಗೊಳಿಸುವ ಕಾರ್ಯನೀತಿಯನ್ನು, ಮಾರ್ಗದರ್ಶಿ ಸೂತ್ರಗಳು, ಲೈಸೆನ್ಸುಗಳು ಹಾಗೂ ನವೀಕರಣಗೊಳಿಸುವುದೂ ಒಳಗೊಂಡಂತೆ ಸೂಕ್ತ ಷರತ್ತುಗಳನ್ನು ರೂಪಿಸಲು ರಾಜ್ಯ ಸರ್ಕಾರಕ್ಕೆ ನಿರ್ದೇಶಿಸಿರುವುದರಿಂದ;

ಕರ್ನಾಟಕ ರಾಜ್ಯದಲ್ಲಿ, ಲೈಸೆನ್ಸುಗಳನ್ನು ನೀಡುವುದಕ್ಕೆ ಹಾಗೂ ನವೀಕರಣಕ್ಕೆ ಮತ್ತು ಕೆಲವು ಇತರೆ ವಿಷಯಗಳಿಗೆ ಉಪಬಂಧ ಕಲ್ಪಿಸಲು ರಾಜ್ಯ ಉಚ್ಚ ನ್ಯಾಯಾಲಯವು/ ಸರ್ವೋಚ್ಚ ನ್ಯಾಯಾಲಯವು ಆದೇಶಿಸಿರುವುದರಿಂದ ಶಾಸನವನ್ನು ಅಧಿನಿಯಮಿಸುವುದು ಅವಶ್ಯಕವೆಂದು ಪರಿಗಣಿಸಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೆರಡನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ,–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕಲ್ಲುಪುಡಿ ಮಾಡುವ (ಕ್ರಷರ್‌ಗಳ) ಘಟಕಗಳ ನಿಯಂತ್ರಣ ಅಧಿನಿಯಮ, 2011 ಎಂದು ಕರೆಯತಕ್ಕದ್ದು.

(2) ಇದು, 2011ರ ಸೆಪ್ಟೆಂಬರ್ ಏಳನೇ ದಿನಾಂಕದಿಂದ ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು.

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ, ವಿಷಯಕ್ಕೆ ಅಥವಾ ಸಂದರ್ಭಕ್ಕೆ ವಿರುದ್ಧವಾದುದು ಏನಾದರೂ ಇದ್ದ ಹೊರತು,–

(ಎ) "ಅಪೀಲು ಪ್ರಾಧಿಕಾರ" ಎಂದರೆ, ಸಂಬಂಧಪಟ್ಟ ಪ್ರದೇಶದ ಪ್ರಾದೇಶಿಕ ಕಮೀಷನರ್;

(ಬಿ) "ಸಮಿತಿ" ಎಂದರೆ, 8ನೇ ಪ್ರಕರಣದಡಿಯಲ್ಲಿ ಸ್ಥಾಪಿತವಾದ ಜಿಲ್ಲಾ ಕಲ್ಲುಪುಡಿ ಮಾಡುವ ಘಟಕದ ನಿಯಂತ್ರಣ ಸಮಿತಿ;

(ಸಿ) "ಜಿಲ್ಲಾಧಿಕಾರಿ" ಎಂದರೆ, ಸಂಬಂಧಪಟ್ಟ ಕಂದಾಯ ಜಿಲ್ಲೆಯ ಜಿಲ್ಲಾಧಿಕಾರಿ;

(ಡಿ) "ಲೈಸೆನ್ಸು" ಎಂದರೆ, ಈ ಅಧಿನಿಯಮದ ಅಡಿಯಲ್ಲಿ ಮಂಜೂರಾದ ಲೈಸೆನ್ಸು;

(ಇ) "ಲೈಸೆನ್ಸುದಾರ" ಎಂದರೆ, ಈ ಅಧಿನಿಯಮದ ಅಡಿಯಲ್ಲಿ ಲೈಸೆನ್ಸನ್ನು ಹೊಂದಿರುವ ಒಬ್ಬ ವ್ಯಕ್ತಿ ಅಥವಾ ಒಂದು ಕಂಪನಿ;

(ಎಫ್) "ಲೈಸೆನ್ಸಿಂಗ್ ಪ್ರಾಧಿಕಾರ" ಎಂದರೆ, ಸಂಬಂಧಪಟ್ಟ ಕಂದಾಯ ಜಿಲ್ಲೆಯ ಜಿಲ್ಲಾಧಿಕಾರಿ;

(ಜಿ) "ಲೈಸೆನ್ಸು ಶುಲ್ಕ" ಎಂದರೆ, ಈ ಅಧಿನಿಯಮದ ಅಡಿಯಲ್ಲಿ ಸಂದಾಯ ಮಾಡಬೇಕಾದ ಶುಲ್ಕ;

(ಹೆಚ್) "ಮಾಲಿನ್ಯ ನಿಯಂತ್ರಣ ಮಂಡಳಿ" ಎಂದರೆ, ಜಲ (ಮಾಲಿನ್ಯ ನಿವಾರಣೆ ಮತ್ತು ನಿಯಂತ್ರಣ) ಅಧಿನಿಯಮ, 1974ರ ಉಪಬಂಧದ ಅಡಿಯಲ್ಲಿ ಸ್ಥಾಪಿತವಾದ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ;

(ಐ) "ನಿಯಮಗಳು" ಎಂದರೆ, ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ನಿಯಮಗಳು;

(ಜೆ) "ಸುರಕ್ಷಿತ ವಲಯ" ಎಂದರೆ, ಲೈಸೆನ್ಸಿಂಗ್ ಪ್ರಾಧಿಕಾರವು 6ನೇ ಪ್ರಕರಣದಡಿಯಲ್ಲಿ ಹಾಗೆಂದು ಘೋಷಿಸಿದ ಒಂದು ಸ್ಥಳ ಅಥವಾ ಒಂದು ವಲಯ;

(ಕೆ) "ಕಲ್ಲುಪುಡಿ ಮಾಡುವ ಘಟಕ" ಎಂದರೆ, ಕಲ್ಲುಪುಡಿ ಮಾಡುವ ಯಾವುದೇ ಗಾತ್ರದ ಯಾವುದೇ ಶಕ್ತಿಚಾಲಿತ ಯಂತ್ರ;

(ಎಲ್) "ವರ್ಷ" ಎಂದರೆ ಏಪ್ರಿಲ್ ಒಂದನೇ ದಿನಾಂಕದಿಂದ ಪ್ರಾರಂಭವಾಗಿ ಮುಂದಿನ ವರ್ಷದ ಮಾರ್ಚ್ ಮೂವತ್ತೊಂದನೇ ದಿನಾಂಕಕ್ಕೆ ಮುಕ್ತಾಯವಾಗುವ ಒಂದು ವರ್ಷ.

(2) ಈ ಅಧಿನಿಯಮದಲ್ಲಿ ಉಪಯೋಗಿಸಿದ ಆದರೆ ಪರಿಭಾಷಿಸಿರದ ಎಲ್ಲಾ ಇತರ ಪದಗಳು ಮತ್ತು ಪದಾವಳಿಗಳು, ಗಣಿಗಳು ಮತ್ತು ಖನಿಜಗಳು (ಅಭಿವೃದ್ಧಿ ಮತ್ತು ನಿಯಂತ್ರಣ) ಅಧಿನಿಯಮ, 1957 (1957ರ ಕೇಂದ್ರ ಅಧಿನಿಯಮ 67)ರಲ್ಲಿ ಮತ್ತು ಅದರ ಅಡಿಯಲ್ಲಿ ಹೊರಡಿಸಿದ ನಿಯಮಗಳಲ್ಲಿ ಅವುಗಳಿಗೆ ಅನುಕ್ರಮವಾಗಿ ಗೊತ್ತುಪಡಿಸಿದ ಅವೇ ಅರ್ಥಗಳನ್ನು ಹೊಂದಿರತಕ್ಕದ್ದು.

**3. ಕಲ್ಲುಪುಡಿ ಮಾಡುವ ಘಟಕಗಳನ್ನು ನಡೆಸುವವರು ಲೈಸೆನ್ಸನ್ನು ಪಡೆಯುವುದು.–** (1) ಈ ಅಧಿನಿಯಮದ ಅಡಿಯಲ್ಲಿ ನೀಡಿರುವ ಲೈಸೆನ್ಸಿನ ನಿಬಂಧನೆಗಳು ಮತ್ತು ಷರತ್ತುಗಳ ಅಡಿಯಲ್ಲಿ ಮತ್ತು ಅವುಗಳಿಗನುಸಾರವಾಗಿ ಹೊರತು ರಾಜ್ಯದಲ್ಲಿ ಯಾವೊಬ್ಬ ವ್ಯಕ್ತಿಯೂ ಕಲ್ಲು ಪುಡಿ ಮಾಡುವ ವ್ಯವಹಾರವನ್ನು ಕೈಗೊಳ್ಳತಕ್ಕದ್ದಲ್ಲ.

(2) ಈ ಅಧಿನಿಯಮದ ಪ್ರಾರಂಭದ ದಿನಾಂಕದಂದು, ಯಾವುದೇ ಪ್ರಾಧಿಕಾರದಿಂದ ನೀಡಲಾದ ಲೈಸೆನ್ಸಿನೊಂದಿಗೆ ಕಲ್ಲುಪುಡಿ ಮಾಡುವ ಘಟಕದ ವ್ಯವಹಾರವನ್ನು ನಡೆಸುತ್ತಿರುವ ಯಾವೊಬ್ಬ ವ್ಯಕ್ತಿಯು, 6ನೇ ಪ್ರಕರಣದ ಅಡಿಯಲ್ಲಿ ಸುರಕ್ಷಿತ ವಲಯ ಎಂದು ಘೋಷಣೆಯಾದ ದಿನಾಂಕದಿಂದ ಮೂರು ತಿಂಗಳುಗಳೊಳಗೆ, ಲೈಸೆನ್ಸು ಪ್ರಾಧಿಕಾರಕ್ಕೆ ಈ ಅಧಿನಿಯಮದ 4ನೇ ಪ್ರಕರಣದ ಅಡಿಯಲ್ಲಿ ಲೈಸೆನ್ಸಿಗಾಗಿ ಅರ್ಜಿ ಸಲ್ಲಿಸತಕ್ಕದ್ದು.

(3) (2)ನೇ ಉಪಪ್ರಕರಣದಡಿಯಲ್ಲಿ ಸಲ್ಲಿಸಿದ ಅರ್ಜಿಯನ್ನು ಸ್ವೀಕರಿಸಿದ ತರುವಾಯ, ಲೈಸೆನ್ಸು ಪ್ರಾಧಿಕಾರವು, ಅಸ್ತಿತ್ವದಲ್ಲಿರುವ ಕಲ್ಲುಪುಡಿ ಮಾಡುವ ಘಟಕಗಳು ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಲೈಸೆನ್ಸಿನ ಮಂಜೂರಾತಿಯ ಅಥವಾ ನಿರಾಕರಣೆಯವರೆಗೆ ಅಥವಾ ಸ್ಥಳದ ಮತ್ತು ಲೈಸೆನ್ಸಿನ ಇತರ ಷರತ್ತುಗಳ ನೆರವೇರಿಕೆಯ ಬಗ್ಗೆ ಯುಕ್ತ ಸತ್ಯಾಪನೆಯ ತರುವಾಯ, ಅರ್ಜಿಯನ್ನು ಸ್ವೀಕರಿಸಿದ ದಿನಾಂಕದಿಂದ, ಯಾವ ಅವಧಿಯೊಳಗೆ ಲೈಸೆನ್ಸಿಂಗ್ ಪ್ರಾಧಿಕಾರವು ಅಂಥ ಅರ್ಜಿಯನ್ನು ವಿಲೆ ಮಾಡತಕ್ಕದ್ದೋ ಆ ಮೂರು ತಿಂಗಳುಗಳವರೆಗೆ ಕಾರ್ಯನಿರ್ವಹಿಸುವುದಕ್ಕೆ ಅನುಮತಿಸಬಹುದು.

(4) (3)ನೇ ಉಪಪ್ರಕರಣದಡಿಯಲ್ಲಿ ಲೈಸೆನ್ಸನ್ನು ನೀಡಿದ ಮೇಲೆ, ಅಸ್ತಿತ್ವದಲ್ಲಿರುವ ಕಲ್ಲುಪುಡಿ ಮಾಡುವ ಅಂಥ ಘಟಕವನ್ನು ಆರು ತಿಂಗಳುಗಳೊಳಗೆ ಸುರಕ್ಷಿತ ವಲಯಕ್ಕೆ ಸ್ಥಳಾಂತರಿಸತಕ್ಕದ್ದು.

**4. ಲೈಸೆನ್ಸಿಗೆ ಅರ್ಜಿ.**– (1) ಈ ಅಧಿನಿಯಮದ ಅಡಿಯಲ್ಲಿ ಕಲ್ಲು ಪುಡಿಮಾಡುವ ವ್ಯವಹಾರವನ್ನು ಕೈಗೊಳ್ಳಲು ಲೈಸನ್ಸಿನ ಮಂಜೂರಾತಿ ಅಥವಾ ನವೀಕರಣಕ್ಕಾಗಿನ ಪ್ರತಿಯೊಂದು ಅರ್ಜಿಯನ್ನು, ನಿಯಮಿಸಬಹುದಾದ ಅಂಥ ನಮೂನೆಯಲ್ಲಿ, ಅಂಥ ವಿಧಾನದಲ್ಲಿ, ಅಂಥ ದಸ್ತಾವೇಜುಗಳು ಮತ್ತು ಅಂಥ ಶುಲ್ಕಗಳೊಡನೆ ಲೈಸೆನ್ಸಿಂಗ್ ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು. ಲೈಸೆನ್ಸಿನ ನವೀಕರಣಕ್ಕಾಗಿ ಅರ್ಜಿಯನ್ನು ಲೈಸೆನ್ಸಿನ ಅವಧಿಯ ಮುಕ್ತಾಯಕ್ಕೆ ಮೂರು ತಿಂಗಳು ಮೊದಲು ಲೈಸೆನ್ಸಿಂಗ್ ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

(2) ಲೈಸೆನ್ಸಿನ ಮಂಜೂರಾತಿ ಅಥವಾ ನವೀಕರಣಕ್ಕಾಗಿನ ಅರ್ಜಿಯನ್ನು ಸ್ವೀಕರಿಸಿದ ಮೇಲೆ, ಲೈಸೆನ್ಸಿಂಗ್ ಪ್ರಾಧಿಕಾರವು, ಸ್ಥಳದ ಪರಿಶೀಲನೆಯನ್ನು ಮಾಡಿಸತಕ್ಕದ್ದು ಮತ್ತು ಲೈಸೆನ್ಸಿನ ಇತರ ಷರತ್ತುಗಳ ಪೂರೈಕೆಯನ್ನು ಸತ್ಯಾಪನೆ ಮಾಡಿದ ತರುವಾಯ, ಅರ್ಜಿಯ ದಿನಾಂಕದಿಂದ ಮೂರು ತಿಂಗಳುಗಳೊಳಗೆ, ಅರ್ಜಿಯನ್ನು ಮಂಜೂರು ಮಾಡಬಹುದು ಅಥವಾ ತಿರಸ್ಕರಿಸಬಹುದು.

**5. ಲೈಸೆನ್ಸಿನ ಕಾಲಾವಧಿ.**– ಒಂದು ಲೈಸೆನ್ಸು ಮೂರು ವರ್ಷದ ಅವಧಿಯವರೆಗೆ ಸಿಂಧುವಾಗಿರತಕ್ಕದ್ದು ಮತ್ತು ಈ ಅಧಿನಿಯಮದ ಅಥವಾ ಅದರಡಿಯಲ್ಲಿ ರಚಿಸಲಾದ ನಿಯಮಗಳ ಅಡಿಯಲ್ಲಿ ಹೇಳಲಾದ ಷರತ್ತುಗಳನ್ನು ಪೂರೈಸುವುದಕ್ಕೆ ಒಳಪಟ್ಟು ಮೂರು ವರ್ಷಗಳ ಮತ್ತಷ್ಟು ಅವಧಿಗಾಗಿ ನವೀಕರಿಸಬಹುದು.

**ವಿವರಣೆ:**– ಲೈಸೆನ್ಸನ್ನು ಒಂದು ವರ್ಷದ ಮಧ್ಯದಲ್ಲಿ ಮಂಜೂರು ಮಾಡಿದ್ದಲ್ಲಿ, ಲೈಸೆನ್ಸಿನ ಅವಧಿಯನ್ನು ಲೆಕ್ಕ ಮಾಡುವ ಉದ್ದೇಶಕ್ಕಾಗಿ, ವರ್ಷದ ಉಳಿದ ಭಾಗವನ್ನು ಒಂದು ವರ್ಷವೆಂದು ಭಾವಿಸತಕ್ಕದ್ದು.

**6. ಲೈಸೆನ್ಸಿನ ಮಂಜೂರಾತಿಗಾಗಿ ಷರತ್ತುಗಳು.**– ಈ ಮುಂದಿನ ಷರತ್ತುಗಳಿಗೆ ಒಳಪಟ್ಟು, ಈ ಅಧಿನಿಯಮದ ಅಡಿಯಲ್ಲಿ ಲೈಸೆನ್ಸನ್ನು ಮಂಜೂರು ಮಾಡತಕ್ಕದ್ದು, ಎಂದರೆ:–

(1) ಸುರಕ್ಷಿತ ವಲಯದಿಂದ ಹೊರಗೆ ಕಲ್ಲುಪುಡಿ ಮಾಡುವ ಘಟಕವನ್ನು ಸ್ಥಾಪಿಸತಕ್ಕದ್ದಲ್ಲ.

(2) ಸುರಕ್ಷಿತ ವಲಯವು,–

(ಎ) ರಾಷ್ಟ್ರೀಯ ಹೆದ್ದಾರಿಗಳು, ವಸತಿ ಪ್ರದೇಶಗಳು, ದೇವಾಲಯಗಳು, ಶಾಲೆಗಳು ಮತ್ತು ನದಿಯಿಂದ ಎರಡು ಕಿಲೋಮೀಟರುಗಳ ದೂರ;

(ಬಿ) ರಾಜ್ಯ ಹೆದ್ದಾರಿಯಿಂದ ಒಂದೂವರೆ ಕಿಲೋಮೀಟರುಗಳ ದೂರ;

(ಸಿ) ಸಂಪರ್ಕ ರಸ್ತೆಗಳಿಂದ ಐದು ನೂರು ಮೀಟರುಗಳ ದೂರ;

(ಡಿ) ಪೌರನಿಗಮಗಳ ಪರಿಮಿತಿಗಳಿಂದ ಎಂಟು ಕಿಲೋಮೀಟರುಗಳ ದೂರ;

(ಇ) ಜಿಲ್ಲಾ ಕೇಂದ್ರ ಸ್ಥಾನಗಳ ಪರಿಮಿತಿಗಳಿಂದ ನಾಲ್ಕು ಕಿಲೋಮೀಟರುಗಳು ದೂರ;

(ಎಫ್) ತಾಲ್ಲೂಕು ಕೇಂದ್ರ ಸ್ಥಾನಗಳ ಗಡಿ ಪರಿಮಿತಿಗಳಿಂದ ಎರಡು ಕಿಲೋಮೀಟರುಗಳ ದೂರ;

(ಜಿ) ಸರ್ಕಾರದ ದಾಖಲೆಗಳಲ್ಲಿ ಯಾವುದೇ ಜನವಸತಿ ಗ್ರಾಮ ಅಥವಾ ಅರಣ್ಯ ಎಂದು ದಾಖಲಾದ ಪರಿಮಿತಿಗಳಿಂದ ಅಥವಾ ಕಂದಾಯ ದಾಖಲೆಗಳಲ್ಲಿ ವ್ಯವಸಾಯ ಯೋಗ್ಯ ಭೂಮಿ ಎಂದು ತೋರಿಸಿರುವ ಯಾವುದೇ ಖಾಸಗಿ ಭೂಮಿಯ ಮಿತಿಗಳಿಂದ ಒಂದು ಕಿಲೋಮೀಟರು ದೂರ,

– ಇರುವ ಸ್ಥಳದೊಳಗೆ ಇರತಕ್ಕದ್ದು.

(3) ಐವತ್ತು ಕಿಲೋಮೀಟರುಗಳ ವ್ಯಾಸದೊಳಗೆ ಯಾವುದೇ ಎರಡು ಸುರಕ್ಷಿತ ವಲಯಗಳು ಇರತಕ್ಕದ್ದಲ್ಲ.

(4) ಲೈಸೆನ್ಸಿಂಗ್ ಪ್ರಾಧಿಕಾರವು, ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಿಂದ ನಾಲ್ಕು ತಿಂಗಳುಗಳೊಳಗೆ, ಅವುಗಳ ಅಧಿಕಾರ ವ್ಯಾಪ್ತಿಯೊಳಗಿನ ಪ್ರದೇಶ ಮತ್ತು ಮಿತಿಗಳನ್ನು ನಿರ್ದಿಷ್ಟಪಡಿಸಿ ಸುರಕ್ಷಿತ ವಲಯಗಳನ್ನು ಗುರುತಿಸತಕ್ಕದ್ದು ಮತ್ತು ಅಧಿಸೂಚನೆಯ ಮೂಲಕ ಹಾಗೆಂದು ಘೋಷಿಸತಕ್ಕದ್ದು.

ಪರಂತು, ಲೈಸೆನ್ಸಿಂಗ್ ಪ್ರಾಧಿಕಾರವು ಕೆಲವು ಅಸಾಧಾರಣ ಸಂದರ್ಭಗಳಲ್ಲಿ ಮತ್ತು ಲಿಖಿತದಲ್ಲಿ ದಾಖಲಿಸಬೇಕಾದ ಕಾರಣಗಳಿಗಾಗಿ, ಸುರಕ್ಷಿತ ವಲಯಗಳ ಘೋಷಣೆಯ ಉದ್ದೇಶಕ್ಕೆ (2)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಷರತ್ತು ಅಥವಾ ಷರತ್ತುಗಳನ್ನು ಸಡಿಲಗೊಳಿಸಬಹುದು.

(5) ಲೈಸೆನ್ಸಿಂಗ್ ಪ್ರಾಧಿಕಾರವು, ಮಾಲಿನ್ಯ ನಿಯಂತ್ರಣ ಮಂಡಳಿಗೆ, ಅದರ ಪ್ರಮಾಣೀಕರಣಕ್ಕಾಗಿ (4)ನೇ ಉಪಪ್ರಕರಣದಡಿಯಲ್ಲಿ ಸುರಕ್ಷಿತ ವಲಯದ ಘೋಷಣೆಯ ಪ್ರಸ್ತಾವವನ್ನು ಕಳುಹಿಸತಕ್ಕದ್ದು. ಮಾಲಿನ್ಯ ನಿಯಂತ್ರಣ ಮಂಡಳಿಯು ಪ್ರಸ್ತಾವವನ್ನು ಸ್ವೀಕರಿಸಿದ ಮೇಲೆ ಅಥವಾ ಪ್ರಸ್ತಾವದ

ದಿನಾಂಕದಿಂದ ಮೂರು ತಿಂಗಳುಗಳು ಕಳೆದ ತರುವಾಯ, ಲೈಸೆನ್ಸಿಂಗ್ ಪ್ರಾಧಿಕಾರವು ಯಾವುದೇ ಪತ್ರವನ್ನು ಸ್ವೀಕರಿಸಿರದಿದ್ದಲ್ಲಿ, ಲೈಸೆನ್ಸಿಂಗ್ ಪ್ರಾಧಿಕಾರವು ಅಧಿಸೂಚನೆಯ ಮೂಲಕ ಪ್ರಸ್ತಾವಕ್ಕನುಸಾರವಾಗಿ ಸುರಕ್ಷಿತ ವಲಯವನ್ನು ಘೋಷಿಸತಕ್ಕದ್ದು.

(6) ರಾಜ್ಯ ಸರ್ಕಾರಕ್ಕೆ ಅಥವಾ ಸಂದರ್ಭಾನುಸಾರವಾಗಿ ಪಂಚಾಯತಿಗೆ ಸೇರಿದ ಕಲ್ಲುಪುಡಿ ಮಾಡುವ ಘಟಕವನ್ನು ಒಳಗೊಂಡಂತೆ ಪ್ರತಿಯೊಂದು ಕಲ್ಲುಪುಡಿ ಮಾಡುವ ಘಟಕವು, ಕನಿಷ್ಠ ಒಂದು ಎಕರೆಯ ಪ್ರದೇಶದಲ್ಲಿ ಇರತಕ್ಕದ್ದು.

(7) ಪ್ರತಿಯೊಂದು ಘಟಕವು, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯು ಕಾಲಕಾಲಕ್ಕೆ ನಿಯಮಿಸಬಹುದಾದ ಮಾಲಿನ್ಯ ನಿಯಂತ್ರಣ ಕ್ರಮಗಳು ಅಥವಾ ಅಂಥ ಇತರ ಸುರಕ್ಷಿತ ಕ್ರಮಗಳನ್ನು ಪಾಲಿಸಕ್ಕದ್ದು.

(8) ಪ್ರತಿಯೊಂದು ಘಟಕವು ಶಬ್ಧ (ವಿನಿಯಮಗಳು ಮತ್ತು ನಿಯಂತ್ರಣ) ನಿಯಮಗಳು, 2000 ಕ್ಕೆ ಅನುಸಾರವಾಗಿರತಕ್ಕದ್ದು.

(9) ಘಟಕವು ವಾಯು (ಮಾಲಿನ್ಯ ತಡೆಗಟ್ಟುವ ಮತ್ತು ನಿಯಂತ್ರಿಸುವ) ಅಧಿನಿಯಮ, 1981 ಮತ್ತು ಪರಿಸರ ಸಂರಕ್ಷಣ ಅಧಿನಿಯಮ, 1986 ಮತ್ತು ಅವುಗಳಡಿಯಲ್ಲಿ ರಚಿಸಲಾದ ನಿಯಮಗಳ ಉಪಬಂಧಗಳನ್ನು ಪಾಲಿಸತಕ್ಕದ್ದು.

7. **ಸರ್ಕಾರಿ ಯೋಜನೆಗಳಿಗಾಗಿ ಕಲ್ಲುಪುಡಿ ಮಾಡುವ ಘಟಕಗಳಿಗೆ ಲೈಸೆನ್ಸ್.–** ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ರಾಷ್ಟ್ರೀಯ ಹೆದ್ದಾರಿಗಳ, ರಾಜ್ಯ ಹೆದ್ದಾರಿಗಳ ನಿರ್ಮಾಣಕ್ಕಾಗಿ ಅಥವಾ ಯಾವುದೇ ಇತರ ಮೂಲ ಸೌಕರ್ಯಕ್ಕಾಗಿರುವ ಸರ್ಕಾರಿ ಯೋಜನೆಗಳಿಗಾಗಿ, ಮತ್ತು ಅನುಮೋದಿತವಾದ ಸಾರ್ವಜನಿಕ – ಖಾಸಗಿ ಪಾಲುದಾರಿಕೆ ಯೋಜನೆಗಾಗಿಯೇ ಅನನ್ಯವಾಗಿ ತಾತ್ಕಾಲಿಕ ಕಲ್ಲುಪುಡಿ ಮಾಡುವ ಘಟಕಕ್ಕೆ ಲೈಸೆನ್ಸನ್ನು, ವಾಯು (ಮಾಲಿನ್ಯ ನಿವಾರಣೆ ಮತ್ತು ನಿಯಂತ್ರಣ) ಅಧಿನಿಯಮ, 1981 ಮತ್ತು ಪರಿಸರ ಸಂರಕ್ಷಣೆ ಅಧಿನಿಯಮ, 1986 ಮತ್ತು ಅವುಗಳ ಅಡಿಯಲ್ಲಿ ರಚಿಸಲಾದ ನಿಯಮಗಳ ಉಪಬಂಧಗಳನ್ನು ಪೂರೈಸಿದ ಮೇಲೆ, ಅಂಥ ಯೋಜನಾ ಅವಧಿಗಾಗಿ, ಮಂಜೂರು ಮಾಡಬಹುದು.

8. **ಜಿಲ್ಲಾ ಕಲ್ಲುಪುಡಿ ಮಾಡುವ ಘಟಕಗಳ ನಿಯಂತ್ರಣ ಸಮಿತಿಯ ಸ್ಥಾಪನೆ.–** (1) ಈ ಅಧಿನಿಯಮದ ಪ್ರಾರಂಭದ ದಿನಾಂಕದಂದು ಮತ್ತು ಅಂದಿನಿಂದ ಪ್ರತಿಯೊಂದು ಕಂದಾಯ ಜಿಲ್ಲೆಯಲ್ಲಿ, ಈ ಮುಂದಿನವರನ್ನು ಒಳಗೊಂಡಿರುವ ಒಂದು ಜಿಲ್ಲಾ ಕಲ್ಲುಪುಡಿ ಮಾಡುವ ಘಟಕಗಳ ನಿಯಂತ್ರಣ ಸಮಿತಿಯನ್ನು ಸ್ಥಾಪಿಸತಕ್ಕದ್ದು, ಎಂದರೆ:–

| | | | |
|---|---|---|---|
| (ಎ) | ಜಿಲ್ಲೆಯ ಜಿಲ್ಲಾಧಿಕಾರಿ | .... | ಅಧ್ಯಕ್ಷರು |
| (ಬಿ) | ಜಿಲ್ಲೆಯ ಪೋಲೀಸ್ ಸೂಪರಿಂಟೆಂಡೆಂಟ್ | .... | ಪದನಿಮಿತ್ತ ಸದಸ್ಯ |
| (ಸಿ) | ಜಿಲ್ಲೆಯ ಜಿಲ್ಲಾ ಪಂಚಾಯಿತಿಯ ಮುಖ್ಯ ಕಾರ್ಯನಿರ್ವಹಣಾಧಿಕಾರಿ | .... | ಪದನಿಮಿತ್ತ ಸದಸ್ಯ |
| (ಡಿ) | ಜಿಲ್ಲೆಯ ಉಪ ಅರಣ್ಯ ಸಂರಕ್ಷಣಾಧಿಕಾರಿ | .... | ಪದನಿಮಿತ್ತ ಸದಸ್ಯ |
| (ಇ) | ಜಿಲ್ಲೆಯ ಪರಿಸರ ಅಧಿಕಾರಿ | .... | ಪದನಿಮಿತ್ತ ಸದಸ್ಯ |
| (ಎಫ್) | ಜಿಲ್ಲೆಯ ಅಗ್ನಿಶಾಮಕ ದಳದ ಸಹಾಯಕ ನಿರ್ದೇಶಕರು | .... | ಪದನಿಮಿತ್ತ ಸದಸ್ಯ |
| (ಜಿ) | ಜಿಲ್ಲೆಯ ಕಾರ್ಖಾನೆಗಳು ಮತ್ತು ಬಾಯ್ಲರುಗಳ ಸಹಾಯಕ ನಿರ್ದೇಶಕರು | .... | ಪದನಿಮಿತ್ತ ಸದಸ್ಯ |
| (ಎಚ್) | ಜಿಲ್ಲೆಯ ಪ್ರಭಾರದಲ್ಲಿರುವ ಕಾರ್ಮಿಕ ಅಧಿಕಾರಿ | .... | ಪದನಿಮಿತ್ತ ಸದಸ್ಯ |
| (ಐ) | ಜಿಲ್ಲಾ ಆರೋಗ್ಯಾಧಿಕಾರಿ | .... | ಪದನಿಮಿತ್ತ ಸದಸ್ಯ |
| (ಜೆ) | ಅಧ್ಯಕ್ಷರು ನೇಮಕ ಮಾಡಬೇಕಾದ ಗಣಿ ಮತ್ತು ಭೂಗರ್ಭ ಇಲಾಖೆಯ ಉಪನಿರ್ದೇಶಕ/ಹಿರಿಯ ಭೂಗರ್ಭ ವಿಜ್ಞಾನಿ | .... | ಸದಸ್ಯ ಕಾರ್ಯದರ್ಶಿ |

(2) ಜಿಲ್ಲಾ ಕಲ್ಲುಪುಡಿ ಮಾಡುವ ಘಟಕಗಳ ನಿಯಂತ್ರಣ ಸಮಿತಿಯು ಲೈಸೆನ್ಸಿಂಗ್ ಪ್ರಾಧಿಕಾರಕ್ಕೆ ನೆರವಾಗತಕ್ಕದ್ದು ಮತ್ತು ಲೈಸೆನ್ಸ್ ಪಡೆದಿರುವ ಆವರಣಗಳ ಮೇಲ್ವಿಚಾರಣೆ ಮಾಡುವ ಜವಾಬ್ದಾರಿಯನ್ನು ಹೊಂದಿರತಕ್ಕದ್ದು. ಲೈಸೆನ್ಸಿಂಗ್ ಪ್ರಾಧಿಕಾರವು, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಲಿ, ಅರಣ್ಯ ಮತ್ತು ಕಂದಾಯ ಇಲಾಖೆಗಳು ಸೇರಿದಂತೆ ಸಂಬಂಧಪಟ್ಟ ಇಲಾಖೆಗಳಿಂದ ನಿರಾಕ್ಷೇಪಣಾ ಪ್ರಮಾಣ ಪತ್ರವನ್ನು (ಎನ್‌ಓಸಿ) ಪಡೆದ ತರುವಾಯ ಮತ್ತು ನಿಯಮಿಸಬಹುದಾದಂಥ ನಿಯಮಗಳಿಗೆ ಅನುಸಾರವಾಗಿ ಲೈಸೆನ್ಸಿಂಗ್ ಪ್ರಾಧಿಕಾರವು ಲೈಸೆನ್ಸನ್ನು ನೀಡತಕ್ಕದ್ದು.

**9. ಲೈಸೆನ್ಸ್ ನೀಡಲಾಗಿರುವ ಕಲ್ಲುಪುಡಿ ಮಾಡುವ ಘಟಕಗಳ ಪರಿಶೀಲನೆ ಮತ್ತು ನಿಯಂತ್ರಣ.–** ಜಿಲ್ಲಾಧಿಕಾರಿ ಅಥವಾ ಜಿಲ್ಲಾಧಿಕಾರಿಯು ಪ್ರಾಧಿಕರಿಸಿದ ಒಬ್ಬ ಅಧಿಕಾರಿಯು ಪ್ರತಿಯೊಂದು ಕಲ್ಲುಪುಡಿ ಮಾಡುವ ಘಟಕವನ್ನು ಕೊನೆ ಪಕ್ಷ ವರ್ಷಕ್ಕೊಮ್ಮೆ ಪರಿಶೀಲನೆ ಮಾಡತಕ್ಕದ್ದು.

**10. ಲೈಸೆನ್ಸಿನ ರದ್ಧತಿ.–** ಈ ಅಧಿನಿಯಮದ ಅಡಿಯಲ್ಲಿ ನೀಡಿದ ಲೈಸೆನ್ಸನ್ನು, ಲೈಸೆನ್ಸಿಂಗ್ ಪ್ರಾಧಿಕಾರವು ಲಿಖಿತದಲ್ಲಿ ದಾಖಲು ಮಾಡಿದ ಕಾರಣಗಳಿಗಾಗಿ, ತಾನಾಗಿಯೇ ಆಗಲೀ ಅಥವಾ ಈ ಅಧಿನಿಯಮದ ಮತ್ತು ನಿಯಮಗಳ ಉಪಬಂಧಗಳಿಗೆ ಅನುಸಾರವಾಗಿಲ್ಲವೆಂದು ಅಥವಾ ಲೈಸೆನ್ಸುದಾರನು ಲೈಸೆನ್ಸಿನ ಷರತ್ತುಗಳನ್ನು ಉಲ್ಲಂಘಿಸಿದ್ದಾನೆಂಬ ಬಗ್ಗೆ ಯಾವೊಬ್ಬ ವ್ಯಕ್ತಿಯು ಸಲ್ಲಿಸಿದ ದೂರನ್ನು ಅಥವಾ ಅರ್ಜಿಯನ್ನು ಪರಿಗಣಿಸಿದ ತರುವಾಯವಾಗಲೀ ರದ್ದುಪಡಿಸಬಹುದು:

ಪರಂತು, ಅಂಥ ರದ್ಧತಿಯಿಂದ ಬಾಧಿತನಾದ ಲೈಸೆನ್ಸುದಾರನಿಗೆ ಅಥವಾ ವ್ಯಕ್ತಿಗೆ ತನ್ನ ಅಹವಾಲನ್ನು ಹೇಳಿಕೊಳ್ಳಲು ಒಂದು ಅವಕಾಶವನ್ನು ನೀಡದ ಹೊರತು, ಈ ಪ್ರಕರಣದ ಅಡಿಯಲ್ಲಿ ಲೈಸೆನ್ಸನ್ನು ರದ್ದುಪಡಿಸುವ ಯಾವುದೇ ಆದೇಶವನ್ನು ಮಾಡತಕ್ಕದ್ದಲ್ಲ.

**11. ನಿರ್ದೇಶನಗಳನ್ನು ನೀಡಲು ಅಧಿಕಾರ.–** ಈ ಅಧಿನಿಯಮದ ಉಪಬಂಧಗಳಿಗೆ ಮತ್ತು ಈ ಸಂಬಂಧದಲ್ಲಿ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರವು ನೀಡಬಹುದಾದ ಯಾವುದೇ ನಿರ್ದೇಶನಗಳಿಗೆ ಒಳಪಟ್ಟು ಲೈಸನ್ಸಿಂಗ್ ಪ್ರಾಧಿಕಾರವು, ಈ ಅಧಿನಿಯಮದಡಿಯಲ್ಲಿ ತನ್ನ ಅಧಿಕಾರಗಳನ್ನು ಚಲಾಯಿಸಿ ಮತ್ತು ತನ್ನ ಪ್ರಕಾರ್ಯಗಳನ್ನು ನಿರ್ವಹಿಸಿ, ಯಾವೊಬ್ಬ ವ್ಯಕ್ತಿ, ಅಧಿಕಾರಿ ಅಥವಾ ಪ್ರಾಧಿಕಾರಕ್ಕೆ ಲಿಖಿತದಲ್ಲಿ ಯಾವುದೇ ನಿರ್ದೇಶನಗಳನ್ನು ನೀಡಬಹುದು ಮತ್ತು ಅಂಥ ವ್ಯಕ್ತಿ, ಅಧಿಕಾರಿ ಅಥವಾ ಪ್ರಾಧಿಕಾರವು ಅಂಥ ನಿರ್ದೇಶನಗಳ ಪಾಲನೆಗೆ ಬದ್ಧವಾಗಿರತಕ್ಕದ್ದು.

**ವಿವರಣೆ.–** ಈ ಪ್ರಕರಣದಡಿಯಲ್ಲಿನ ನಿರ್ದೇಶನಗಳನ್ನು ನೀಡುವ ಅಧಿಕಾರವು,

(ಎ) ಯಾವುದೇ ಕಲ್ಲುಪುಡಿ ಮಾಡುವ ಘಟಕದ ಸಮಾಪನ, ನಿಷೇಧ ಅಥವಾ ನಿಯಂತ್ರಣ; ಅಥವಾ

(ಬಿ) ಕಲ್ಲು ಪುಡಿ ಮಾಡುವ ಘಟಕಕ್ಕೆ ವಿದ್ಯುಚ್ಛಕ್ತಿ, ನೀರು ಪೂರೈಕೆ ಅಥವಾ ಯಾವುದೇ ಇತರ ಸೇವೆಯನ್ನು ಸ್ಥಗಿತಗೊಳಿಸುವುದು ಅಥವಾ ನಿಯಂತ್ರಿಸುವುದು,

–ಇವುಗಳಿಗೆ ಸಂಬಂಧಿಸಿದಂತೆ ನಿರ್ದೇಶನಗಳನ್ನು ನೀಡುವ ಅಧಿಕಾರವನ್ನೂ ಒಳಗೊಂಡಿರತಕ್ಕದ್ದು.

**12. ಬಾಧಿತರಿಗಾಗಿ ಪರಿಹಾರ ನಿಧಿ.–** (1) ಸಮಿತಿಯು, ಬಾಧಿತರಿಗಾಗಿ ಪರಿಹಾರ ನಿಧಿ ಎಂದು ಕರೆಯಲಾಗುವ ಪ್ರತ್ಯೇಕ ನಿಧಿಯನ್ನು ಹೊಂದಿರತಕ್ಕದ್ದು ಮತ್ತು ನಿರ್ವಹಿಸತಕ್ಕದ್ದು ಮತ್ತು ತಾನು ವಿಧಿಸಿದ ಲೈಸೆನ್ಸ್ ಶುಲ್ಕಗಳು, ಜುಲ್ಮಾನೆಗಳು ಮತ್ತು ದಂಡಗಳ ರೂಪದಲ್ಲಿ ಸ್ವೀಕರಿಸಿದ ಎಲ್ಲಾ ಹಣವನ್ನು ಇದಕ್ಕೆ ಜಮೆ ಮಾಡತಕ್ಕದ್ದು. ಇದನ್ನು, ಈ ಅಧಿನಿಯಮ ಮತ್ತು ಇದರಡಿಯಲ್ಲಿ ರಚಿಸಿದ ನಿಯಮಗಳಿಗನುಸಾರವಾಗಿ ಹೊಂದಿರತಕ್ಕದ್ದು, ವಿನಿಯೋಗಿಸತಕ್ಕದ್ದು ಮತ್ತು ವಿತರಿಸತಕ್ಕದ್ದು.

(2) ಸಮಿತಿಯ ಅಧ್ಯಕ್ಷ ಮತ್ತು ಸದಸ್ಯ ಕಾರ್ಯದರ್ಶಿಯು ಈ ಅಧಿನಿಯಮದಡಿಯಲ್ಲಿ ರಚಿಸಲಾದ ನಿಯಮಗಳಿಗನುಸಾರವಾಗಿ ಬಾಧಿತರಿಗಾಗಿ ಪರಿಹಾರ ನಿಧಿಯನ್ನು ನಿರ್ವಹಿಸತಕ್ಕದ್ದು.

(3) ಬಾಧಿತರಿಗಾಗಿ ಪರಿಹಾರ ನಿಧಿಯನ್ನು, ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ನಿಯಮಿಸಬಹುದಾದ ರೀತಿಯಲ್ಲಿ ಇಡತಕ್ಕದ್ದು.

(4) ಸಮಿತಿಯು, ಕಲ್ಲು ಪುಡಿ ಮಾಡುವ ಘಟಕದಿಂದ ಆರೋಗ್ಯದ ತೊಂದರೆ ಉಂಟಾದ ಕಾರಣದ ಮೇಲೆ, ಆರೋಗ್ಯದ ತೊಂದರೆ ಉಂಟಾದ ದಿನಾಂಕದಿಂದ ಮೂರು ತಿಂಗಳ ಅವಧಿಯೊಳಗೆ ಬಾಧಿತರಾದವರಿಂದ ದೂರುಗಳು ಅಥವಾ ಅರ್ಜಿಗಳು ಅಥವಾ ಕ್ಲೇಮುಗಳನ್ನು ಸ್ವೀಕರಿಸತಕ್ಕದ್ದು ಮತ್ತು ಅಂಥ ಅರ್ಜಿಗಳನ್ನು ಪರಿಗಣಿಸತಕ್ಕದ್ದು ಹಾಗೂ ಅರ್ಜಿಯನ್ನು ಸ್ವೀಕರಿಸಿದ ದಿನಾಂಕದಿಂದ ಮೂರು ತಿಂಗಳುಗಳ ಅವಧಿಯೊಳಗೆ ಪ್ರತಿಯೊಬ್ಬ ಅರ್ಜಿದಾರನಿಗೆ ನೀಡಬೇಕಾದ ಪರಿಹಾರದ ಮೊತ್ತವನ್ನು ನಿಯಮಿಸಬಹುದಾದ ನಿಯಮಗಳಿಗನುಸಾರವಾಗಿ ನಿರ್ಧರಿಸತಕ್ಕದ್ದು:

ಪರಂತು ಸಮಿತಿಯು, ದೂರು ಅಥವಾ ಅರ್ಜಿಯನ್ನು ಯುಕ್ತ ಸಮಯದಲ್ಲಿ ಸಲ್ಲಿಸದಿರುವುದಕ್ಕೆ ಸೂಕ್ತ ಕಾರಣವನ್ನು ಫಿರ್ಯಾದುದಾರ ಅಥವಾ ಅರ್ಜಿದಾರನು ಹೊಂದಿದ್ದನೆಂಬುದನ್ನು ಮನಗಂಡಲ್ಲಿ, ಮೂರು ತಿಂಗಳು ಮೀರಿದ ತರುವಾಯವೂ ಅಂಥ ದೂರುಗಳು ಅಥವಾ ಅರ್ಜಿಗಳನ್ನು ಪುರಸ್ಕರಿಸಬಹುದು.

(5) ಅಲ್ಲದೆ ಸಮಿತಿಯು, (4)ನೇ ಉಪಪ್ರಕರಣದಡಿಯಲ್ಲಿ ನಿರ್ಧರಿಸಲಾದಂಥ ಮೊತ್ತವನ್ನು, ತಾನು ಸಂದಾಯ ಮಾಡಿದ ಮೊತ್ತಕ್ಕೆ ಹೆಚ್ಚುವರಿಯಾಗಿ, ಬಾಧಿತ ವ್ಯಕ್ತಿಗೆ ಆದೇಶದ ದಿನಾಂಕದಿಂದ ಎರಡು ತಿಂಗಳೊಳಗೆ ಸಂದಾಯ ಮಾಡುವಂತೆ ಲೈಸನ್ಸುದಾರನಿಗೆ ನಿರ್ದೇಶನ ನೀಡಬಹುದು, ಇದಕ್ಕೆ ತಪ್ಪಿದಲ್ಲಿ ಲೈಸನ್ಸ್‌ನ್ನು ರದ್ದುಪಡಿಸತಕ್ಕದ್ದು.

**13. ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ.–** (1) ಬಾಧಿತರಿಗಾಗಿ ಪರಿಹಾರ ನಿಧಿಯ ಎಲ್ಲಾ ಸ್ವೀಕೃತಿಗಳು ಮತ್ತು ವೆಚ್ಚಗಳ ಲೆಕ್ಕಪತ್ರಗಳನ್ನು ನಿಯಮಿಸಬಹುದಾದ ಅಂಥ ವಿಧಾನದಲ್ಲಿ ಮತ್ತು ಅಂಥ ನಮೂನೆಯಲ್ಲಿ ಇಡತಕ್ಕದ್ದು.

(2) ಬಾಧಿತರಿಗಾಗಿ ಪರಿಹಾರ ನಿಧಿಯ ಲೆಕ್ಕಪತ್ರಗಳು ರಾಜ್ಯ ಲೆಕ್ಕಪತ್ರ ಇಲಾಖೆಯಿಂದ ವಾರ್ಷಿಕ ಲೆಕ್ಕಪರಿಶೋಧನೆಗೆ ಒಳಪಟ್ಟಿರತಕ್ಕದ್ದು ಮತ್ತು ವಾರ್ಷಿಕವಾಗಿ ಲೆಕ್ಕಪರಿಶೋಧನಾ ವರದಿಯನ್ನು ರಾಜ್ಯಸರ್ಕಾರಕ್ಕೆ ಕಳುಹಿಸತಕ್ಕದ್ದು.

**14. ವಾರ್ಷಿಕ ವರದಿ.–** ಸಮಿತಿಯು, ಈ ಅಧಿನಿಯಮದ ಅಡಿಯಲ್ಲಿ ತನ್ನ ಚಟುವಟಿಕೆಗಳ ವರದಿಯನ್ನು ಪ್ರತಿವರ್ಷಕ್ಕಾಗಿ ತಯಾರಿಸತಕ್ಕದ್ದು ಮತ್ತು ಅದನ್ನು ನಿಯಮಿಸಬಹುದಾದ ಅಂಥ ನಮೂನೆಯಲ್ಲಿ ಅಂಥ ದಿನಾಂಕದಂದು ಅಥವಾ ಅದಕ್ಕೆ ಮುಂಚೆ ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು ಮತ್ತು ರಾಜ್ಯ ಸರ್ಕಾರವು ಅದನ್ನು ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ ಮಂಡಿಸುವಂತೆ ಮಾಡತಕ್ಕದ್ದು.

**15. ಲೈಸೆನ್ಸಿಂಗ್ ಪ್ರಾಧಿಕಾರದ ಆದೇಶಗಳ ವಿರುದ್ಧ ಅಪೀಲುಗಳು.–** (1) ಸಂಬಂಧಪಟ್ಟ ಪ್ರದೇಶದ ಪ್ರಾದೇಶಿಕ ಕಮೀಷನರನು, ತನಗೆ ಸಂಬಂಧಿಸಿದ ಅಧಿಕಾರ ವ್ಯಾಪ್ತಿಯೊಳಗೆ ಲೈಸೆನ್ಸಿಂಗ್ ಪ್ರಾಧಿಕಾರವು ಹೊರಡಿಸಿದ ಆದೇಶಗಳ ಅಪೀಲುಗಳ ಸಂಬಂಧದಲ್ಲಿ, ಅಪೀಲು ಪ್ರಾಧಿಕಾರಿಯಾಗಿರತಕ್ಕದ್ದು.

(2) ಬಾಧಿತ ವ್ಯಕ್ತಿಗೆ ಕಳುಹಿಸಿದ ಅಪೀಲಿನ ವಿರುದ್ಧದ ಆದೇಶದ ದಿನಾಂಕದಿಂದ ಮೂವತ್ತು ದಿನಗಳೊಳಗೆ ಪ್ರತಿಯೊಂದು ಅಪೀಲನ್ನು ಸಲ್ಲಿಸತಕ್ಕದ್ದು:

ಪರಂತು, ಅಪೀಲನ್ನು ಆ ಅವಧಿಯಲ್ಲಿ ಹಾಜರುಪಡಿಸದಿರಲು ಅಪೀಲುದಾರನು ಸಾಕಷ್ಟು ಕಾರಣವನ್ನು ತೋರಿಸಿದಲ್ಲಿ, ಅಪೀಲನ್ನು ಸದರಿ ಮೂವತ್ತು ದಿನಗಳ ಅವಧಿಯ ತರುವಾಯವೂ ಒಪ್ಪಿಕೊಳ್ಳಬಹುದು.

(3) ಪ್ರತಿಯೊಂದು ಅಪೀಲು, ಆದೇಶಕ್ಕೆ ಆಕ್ಷೇಪಣೆಯ ಆಧಾರಗಳನ್ನು ಸಂಕ್ಷಿಪ್ತವಾಗಿ ಹೇಳುವ ಜ್ಞಾಪನಾಪತ್ರದ ನಮೂನೆಯಲ್ಲಿ ಇರತಕ್ಕದ್ದು ಮತ್ತು ಅದರೊಂದಿಗೆ ಯಾವ ಆದೇಶದ ವಿರುದ್ಧ ಅಪೀಲನ್ನು ಸಲ್ಲಿಸಲಾಗಿದೆಯೋ ಆ ಆದೇಶದ ಪ್ರತಿಯು ಇರತಕ್ಕದ್ದು.

(4) ಅಪೀಲನ್ನು, ಎರಡೂ ಕಡೆಯ ಅಹವಾಲನ್ನು ಕೇಳಿದ ಮೇಲೆ ಮೂರು ತಿಂಗಳುಗಳ ಅವಧಿಯೊಳಗೆ ವಿಲೆ ಮಾಡತಕ್ಕದ್ದು.

**16. ದಂಡಗಳು.–** (1) ಲೈಸೆನ್ಸಿನ ಷರತ್ತುಗಳನ್ನು ಉಲ್ಲಂಘಿಸುವ ಯಾವೊಬ್ಬ ವ್ಯಕ್ತಿಯು, ಎರಡು ವರ್ಷಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಇಪ್ಪತ್ತೈದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

(2) ಈ ಅಧಿನಿಯಮದ ಯಾವುದೇ ಉಪಬಂಧದ ಅಡಿಯಲ್ಲಿ ಮಾಡಲಾದ ಯಾವುದೇ ನಿಯಮವು, ಅದರ ಯಾವುದೇ ಉಲ್ಲಂಘನೆಗಾಗಿ ಒಂದು ವರ್ಷದವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ, ಅಥವಾ ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ಮತ್ತು ಆ ಉಲ್ಲಂಘನೆಯು ಮುಂದುವರೆಯುತ್ತಿರುವ ಸಂದರ್ಭದಲ್ಲಿ, ಮೊದಲನೆಯ ಅಂಥ ಉಲ್ಲಂಘನೆಗಾಗಿ, ಅಪರಾಧ ನಿರ್ಣಯವಾದ ತರುವಾಯ, ಅಂಥ ಉಲ್ಲಂಘನೆಯು ಮುಂದುವರೆದ ಪ್ರತಿಯೊಂದು ದಿನಕ್ಕೆ ಐದುನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಹೆಚ್ಚಿನ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದೆಂದು ಉಪಬಂಧಿಸಬಹುದು.

**17. ಅಪರಾಧಗಳ ಸಂಜ್ಞೇಯತೆ.–** (1) ಲೈಸೆನ್ಸಿಂಗ್ ಪ್ರಾಧಿಕಾರವು, ಈ ಬಗ್ಗೆ ಅಧಿಕೃತಗೊಳಿಸಿದ ವ್ಯಕ್ತಿಯು ಲಿಖಿತದಲ್ಲಿ ಮಾಡಿಕೊಂಡ ದೂರಿನ ಮೇಲಲ್ಲದೆ ಯಾವುದೇ ನ್ಯಾಯಾಲಯವು ಈ ಅಧಿನಿಯಮದ ಅಥವಾ ಅದರಡಿಯಲ್ಲಿ ರಚಿಸಲಾದ ಯಾವುದೇ ನಿಯಮದ ಅಡಿಯಲ್ಲಿ ದಂಡನೀಯವಾದ ಯಾವುದೇ ಅಪರಾಧದ ಸಂಜ್ಞೇಯತೆಯನ್ನು ತೆಗೆದುಕೊಳ್ಳತಕ್ಕದ್ದಲ್ಲ.

(2) ಮೊದಲನೇ ದರ್ಜೆ ನ್ಯಾಯಿಕ ದಂಡನಾಧಿಕಾರಿ ನ್ಯಾಯಾಲಯವನ್ನು ಹೊರತುಪಡಿಸಿ ಇತರ ಯಾವುದೇ ನ್ಯಾಯಾಲಯವು, ಈ ಅಧಿನಿಯಮದ ಅಡಿಯಲ್ಲಿ ದಂಡನೀಯವಾದ ಯಾವುದೇ ಅಪರಾಧದ ವಿಚಾರಣೆ ಮಾಡತಕ್ಕದ್ದಲ್ಲ.

**18. ನಿಯಮಗಳ ರಚನಾಧಿಕಾರ.–** (1) ರಾಜ್ಯ ಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸಲು, ಪೂರ್ವ ಪ್ರಕಟಣೆಯ ತರುವಾಯ, ಅಧಿಸೂಚನೆಯ ಮೂಲಕ, ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ ಸಾಧ್ಯವಾದಷ್ಟು ಬೇಗನೇ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಒಂದು ಅಧಿವೇಶನ ಅಥವಾ ಎರಡು ನಿರಂತರ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳವರೆಗೆ ಅಧಿವೇಶನದಲ್ಲಿರುವಾಗ, ಮಂಡಿಸತಕ್ಕದ್ದು ಮತ್ತು ಅದನ್ನು ಹಾಗೆ ಮಂಡಿಸಿದ ಅಧಿವೇಶನ ಅಥವಾ ನಿಕಟೋತ್ತರ ಅಧಿವೇಶನಗಳು ಮುಕ್ತಾಯವಾಗುವ ಮೊದಲು, ವಿಧಾನಮಂಡಲದ ಉಭಯಸದನಗಳು ನಿಯಮದಲ್ಲಿ ಯಾವುದೇ ಮಾರ್ಪಾಟು ಮಾಡಬೇಕೆಂದು ಒಪ್ಪಿದರೆ ಅಥವಾ ನಿಯಮವನ್ನು ರಚಿಸಬಾರದೆಂದು ಉಭಯ ಸದನಗಳು ಒಪ್ಪಿದರೆ, ಆ ತರುವಾಯ ಅಂಥ ನಿಯಮವು ಸಂದರ್ಭಾನುಸಾರ ಹಾಗೆ ಮಾರ್ಪಾಟಾದ ರೀತಿಯಲ್ಲಿ ಮಾತ್ರ ಪರಿಣಾಮಕಾರಿಯಾಗಿರತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಅಂಥ ಮಾರ್ಪಾಟು ಅಥವಾ ರದ್ದತಿಯು ಆ ನಿಯಮದ ಅಡಿಯಲ್ಲಿ ಈ ಹಿಂದೆ ಮಾಡಿದ ಯಾವುದೇ ಕಾರ್ಯದ ಸಿಂಧುತ್ವಕ್ಕೆ ಬಾಧಕವಾಗತಕ್ಕದ್ದಲ್ಲ.

**19. ತೊಂದರೆಗಳ ನಿವಾರಣೆ.–** ಈ ಅಧಿನಿಯಮದ ಉಪಬಂಧವನ್ನು ಜಾರಿಗೊಳಿಸುವಲ್ಲಿ ಯಾವುದೇ ತೊಂದರೆಯು ಉದ್ಭವಿಸಿದರೆ, ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ಆದೇಶದ ಮೂಲಕ, ಸಂದರ್ಭವು ಅಗತ್ಯಪಡಿಸಬಹುದಾದಂತೆ ತೊಂದರೆಯನ್ನು ನಿವಾರಿಸಲು ಅವಶ್ಯವೆಂದು ಕಂಡುಬರುವ ಯಾವುದೇ ಕಾರ್ಯವನ್ನು ಮಾಡಬಹುದು.

**20. ನಿರಸನ ಮತ್ತು ಉಳಿಸುವಿಕೆಗಳು.–** (1) ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳ (ಕ್ರಷರ್‌ಗಳ) ವಿನಿಯಮನ ಹಾಗೂ ನಿಯಂತ್ರಣ ಅಧ್ಯಾದೇಶ, 2011ನ್ನು (2011ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 2) ಈ ಮೂಲಕ ನಿರಸನಗೊಳಿಸಲಾಗಿದೆ.

(2) ಹಾಗೆ ನಿರಸನಗೊಳಿಸಿದ್ದಾಗ್ಯೂ, ಸದರಿ ಅಧ್ಯಾದೇಶದ ಮೂಲಕ ಮಾಡಲಾದ ಯಾವುದೇ ಕಾರ್ಯ ಅಥವಾ ಕೈಗೊಳ್ಳಲಾದ ಯಾವುದೇ ಕ್ರಮವನ್ನು ಈ ಅಧಿನಿಯಮದ ಅಡಿಯಲ್ಲಿ ಮಾಡಲಾಗಿದೆ ಅಥವಾ ಕೈಗೊಳ್ಳಲಾಗಿದೆ ಎಂದು ಭಾವಿಸತಕ್ಕದ್ದು.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಮಾನ್ಯ ಉಚ್ಚ ನ್ಯಾಯಾಲಯವು, ರಿಟ್ ಅರ್ಜಿ ಸಂಖ್ಯೆ. 17078 / 1997ರಲ್ಲಿ ದಿನಾಂಕ: 10.7.1998ರ ತನ್ನ ಆದೇಶದ ಮೂಲಕ, ಕಲ್ಲುಪುಡಿ ಮಾಡುವ ವ್ಯವಹಾರ ನಡೆಸುವುದನ್ನು ವಿನಿಯಮನಗೊಳಿಸುವ ಕಾರ್ಯನೀತಿಯನ್ನು, ಮಾರ್ಗದರ್ಶಿ ಸೂತ್ರಗಳು, ಲೈಸೆನ್ಸುಗಳು ಹಾಗೂ ಅವುಗಳ ನಿಯತಕಾಲಿಕ ನವೀಕರಣವು ಒಳಗೊಂಡಂತೆ, ಸೂಕ್ತ ಷರತ್ತುಗಳನ್ನು ನಿಯಮಿಸುವ ಮೂಲಕ, ರೂಪಿಸಲು ರಾಜ್ಯ ಸರ್ಕಾರಕ್ಕೆ ನಿರ್ದೇಶಿಸಿದೆ.

(1) ಕಲ್ಲುಪುಡಿ ಮಾಡುವ ಘಟಕಗಳಿಗೆ ಲೈಸೆನ್ಸನ್ನು ನೀಡುವುದು;

(2) ಜಿಲ್ಲಾ ಕಲ್ಲುಪುಡಿ ಮಾಡುವ ಘಟಕಗಳ ವಿನಿಯಮನ ಸಮಿತಿಯ ಸ್ಥಾಪನೆ;

(3) ಕಲ್ಲುಪುಡಿ ಮಾಡುವ ಘಟಕಗಳ ಪರಿಶೀಲನೆ;

(4) ಬಾಧಿತರ ಪರಿಹಾರ ನಿಧಿ;

(5) ಲೈಸೆನ್ಸನ್ನು ನೀಡುವ ಪ್ರಾಧಿಕಾರದ ಆದೇಶಗಳ ವಿರುದ್ಧ ಅಪೀಲುಗಳು;

(6) ದಂಡಗಳು

– ಮತ್ತು ಕೆಲವು ಇತರೆ ಆನುಷಂಗಿಕ ವಿಷಯಗಳಿಗೆ, ಉಪಬಂಧ ಕಲ್ಪಿಸಲು ಶಾಸನವನ್ನು ಅಧಿನಿಯಮಿಸುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ವಿಷಯವು ತುರ್ತು ಸ್ವರೂಪದ್ದಾದ್ದರಿಂದ ಮತ್ತು ಕರ್ನಾಟಕ ರಾಜ್ಯ ವಿಧಾನಮಂಡಲದ ಉಭಯ ಸದನಗಳು ಅಧಿವೇಶನದಲ್ಲಿಲ್ಲದಿದ್ದುದರಿಂದ ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳ (ಕ್ರಷರ್‌ಗಳ) ನಿಯಂತ್ರಣ ಅಧ್ಯಾದೇಶ, 2011ನ್ನು (2011ರ ಕರ್ನಾಟಕ ಅಧ್ಯಾದೇಶ ಸಂಖ್ಯೆ:2) ದಿನಾಂಕ:7.9.2011ರಂದು ಪ್ರಖ್ಯಾಪಿಸಲಾಯಿತು.

ಸದರಿ ಅಧ್ಯಾದೇಶದ ಬದಲಾಗಿ ಈ ವಿಧೇಯಕ.

ಆದ್ದರಿಂದ ಈ ವಿಧೇಯಕ.

**ಕರ್ನಾಟಕ ವಿಧಾನ ಸಭೆಯ ಕಾರ್ಯವಿಧಾನ ಮತ್ತು ನಡವಳಿಗಳ ನಿಯಮ 80ರ (1)ನೇ ಉಪ ನಿಯಮದ ಅಡಿಯಲ್ಲಿ ಅಗತ್ಯಪಡಿಸಲಾದಂತೆ ವಿವರಣಾತ್ಮಕ ಹೇಳಿಕೆ**

ಮಾನ್ಯ ಉಚ್ಚ ನ್ಯಾಯಾಲಯವು, ರಿಟ್ ಅರ್ಜಿ ಸಂಖ್ಯೆ. 17078 / 1997ರಲ್ಲಿ ದಿನಾಂಕ: 10.7.1998ರ ತನ್ನ ಆದೇಶದ ಮೂಲಕ, ಕಲ್ಲುಪುಡಿ ಮಾಡುವ ವ್ಯವಹಾರ ನಡೆಸುವುದನ್ನು ವಿನಿಯಮನಗೊಳಿಸುವ ಕಾರ್ಯನೀತಿಯನ್ನು, ಮಾರ್ಗದರ್ಶಿ ಸೂತ್ರಗಳು, ಲೈಸೆನ್ಸುಗಳು ಹಾಗೂ ಅವುಗಳ ನಿಯತಕಾಲಿಕ ನವೀಕರಣವು ಒಳಗೊಂಡಂತೆ, ಸೂಕ್ತ ಷರತ್ತುಗಳನ್ನು ನಿಯಮಿಸುವ ಮೂಲಕ, ರೂಪಿಸಲು ರಾಜ್ಯ ಸರ್ಕಾರಕ್ಕೆ ನಿರ್ದೇಶಿಸಿದೆ.

(1) ಕಲ್ಲುಪುಡಿ ಮಾಡುವ ಘಟಕಗಳಿಗೆ ಲೈಸೆನ್ಸನ್ನು ನೀಡುವುದು;

(2) ಜಿಲ್ಲಾ ಕಲ್ಲುಪುಡಿ ಮಾಡುವ ಘಟಕಗಳ ವಿನಿಯಮನ ಸಮಿತಿಯ ಸ್ಥಾಪನೆ;

(3) ಕಲ್ಲುಪುಡಿ ಮಾಡುವ ಘಟಕಗಳ ಪರಿಶೀಲನೆ;

(4) ಬಾಧಿತರ ಪರಿಹಾರ ನಿಧಿ;

(5) ಲೈಸೆನ್ಸನ್ನು ನೀಡುವ ಪ್ರಾಧಿಕಾರದ ಆದೇಶಗಳ ವಿರುದ್ಧ ಅಪೀಲುಗಳು;

(6) ದಂಡಗಳು

– ಮತ್ತು ಕೆಲವು ಇತರೆ ಆನುಷಂಗಿಕ ವಿಷಯಗಳಿಗೆ, ಉಪಬಂಧ ಕಲ್ಪಿಸಲು ಶಾಸನವನ್ನು ಅಧಿನಿಯಮಿಸುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ವಿಷಯವು ತುರ್ತು ಸ್ವರೂಪದ್ದಾದ್ದರಿಂದ ಮತ್ತು ಕರ್ನಾಟಕ ರಾಜ್ಯ ವಿಧಾನಮಂಡಲದ ಉಭಯ ಸದನಗಳು ಅಧಿವೇಶನದಲ್ಲಿಲ್ಲದಿದ್ದುದರಿಂದ ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳ (ಕ್ರಷರ್‌ಗಳ) ನಿಯಂತ್ರಣ ಅಧ್ಯಾದೇಶ, 2011ನ್ನು (2011ರ ಕರ್ನಾಟಕ ಅಧ್ಯಾದೇಶ ಸಂಖ್ಯೆ:2) ದಿನಾಂಕ:7.9.2011ರಂದು ಪ್ರಖ್ಯಾಪಿಸಲಾಯಿತು.

ಸದರಿ ಅಧ್ಯಾದೇಶದ ಬದಲಾಗಿ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಳ್ಳುವುದಿಲ್ಲ.

**ಪ್ರತ್ಯಾಯೋಜಿತ ಶಾಸನ ರಚನಾಧಿಕಾರ ಕುರಿತ ಜ್ಞಾಪನ ಪತ್ರ**

ಖಂಡ 4 : ಲೈಸೆನ್ಸು ಫೀಜು, ಲೈಸೆನ್ಸಿನ ಮತ್ತು ನವೀಕರಣದ ಅರ್ಜಿ ನಮೂನೆ ಮತ್ತು ಲೈಸೆನ್ಸಿಗಾಗಿನ ಅರ್ಜಿಯೊಂದಿಗೆ ಸಲ್ಲಿಸಬೇಕಾದ ದಾಖಲೆಗಳನ್ನು ನಿಯಮಿಸಲು ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

ಖಂಡ 12 : (2) ನೇ ಉಪ ಖಂಡವು ಬಾಧಿತರಿಗಾಗಿ ಪರಿಹಾರ ನಿಧಿಯನ್ನು ನಿರ್ವಹಿಸುವುದಕ್ಕಾಗಿ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

(3) ನೇ ಉಪ ಖಂಡವು ಬಾಧಿತರಿಗಾಗಿ ಪರಿಹಾರ ನಿಧಿಯನ್ನು ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಇಡುವ ವಿಧಾನವನ್ನು ನಿಯಮಿಸಲು ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

(4) ನೇ ಉಪ ಖಂಡವು ಬಾಧಿತರಿಗೆ ನೀಡುವ ಪರಿಹಾರ ಮೊತ್ತವನ್ನು ನಿರ್ಧರಿಸುವ ವಿಧಾನವನ್ನು ನಿಯಮಿಸಲು ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

ಖಂಡ 13 : (1)ನೇ ಉಪ ಖಂಡವು ಬಾಧಿತರಿಗಾಗಿ ಪರಿಹಾರ ನಿಧಿಯ ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆಯನ್ನು ಮಾಡುವ ವಿಧಾನವನ್ನು ನಿಯಮಿಸುವುದಕ್ಕಾಗಿ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

ಖಂಡ 14: ವಾರ್ಷಿಕ ವರದಿಯನ್ನು ತಯಾರಿಸುವ ವಿಧಾನವನ್ನು ರಚಿಸಲು ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

ಖಂಡ 18: (1)ನೇ ಉಪ ಖಂಡವು ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸುವುದಕ್ಕಾಗಿ ಪೂರ್ವ ಪ್ರಕಟಣೆಯ ತರುವಾಯ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಡಿ.ವಿ. ಸದಾನಂದ ಗೌಡ**
ಮುಖ್ಯಮಂತ್ರಿ

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

# KARNATAKA LEGISLATIVE ASSEMBLY

## THIRTEENTH LEGISLATIVE ASSEMBLY

## ELEVENTH SESSION

## THE KARNATAKA REGULATION OF STONE CRUSHERS BILL, 2011

## (L.A. Bill No. 38 of 2011)

A Bill to provide for the Regulation of Stone Crushers in the State of Karnataka.

Whereas the Hon'ble High Court of Karnataka by its order dated:10.7.1998 in Writ Petition No.17078/1997 has directed the State Government to formulate a policy regulating the carrying on the business related to the crushing of stones by prescribing reasonable conditions including guidelines and licenses and their renewals.

And whereas it is considered necessary to enact a legislation providing for licenses and their renewals in the State of Karnataka and for certain other matters.

Be it enacted by the Karnataka State Legislature in the sixty-second year of Republic of India as follows:-

**1. Short title and commencement.-** (1) This Act may be called the Karnataka Regulation of Stone Crushers Act, 2011.

(2) It shall be deemed to have come into force with effect from the Seventh day of September, 2011.

**2. Definitions.-** (1) In this Act, unless there is anything repugnant in the subject or context,-

(a) "Appellate Authority" means the Regional Commissioner of the concerned region;

(b) "committee" means the District Stone Crusher Regulation Committee constituted under section 8;

(c) "Deputy Commissioner" means the Deputy Commissioner of the concerned Revenue District;

(d) "Licence" means a licence granted under this Act;

(e) "Licensee" means a person or a company holding licence under this Act;

(f) "Licencing Authority" means the Deputy Commissioner of the concerned Revenue District;

(g) "Licence fee" means the licence fee payable under this Act;

(h) "Pollution Control Board" means the Karnataka State Pollution Control Board established under the provisions of the Water (Prevention and Control of Pollution) Act, 1974;

(i) "rules" means rules made under this Act;

(j) "safer zone" means a location or a zone declared as such by the Licencing Authority under section 6;

(k) "stone crusher" means any power driven machinery of any size which crushes stone;

(l) "year" means year commencing on the first day of April and concluding on 31$^{st}$ day of March of the succeeding year.

(2) All other words and expressions used in this Act but not defined shall have the same meanings respectively assigned to them in the Mines and Minerals (Development and Regulation) Act, 1957 (Central Act 67 of 1957) and rules issued thereunder.

**3. Stone crushers to obtain license.-** (1) No person shall carry on the business of stone crushing in the State except under and in accordance with the terms and conditions of a license issued under this Act.

(2) Any person who is carrying on the business of stone crusher on the date of commencement of this Act with a license issued by any authority shall apply to the Licencing Authority for a license under section 4 of the Act within three months from the date of declaration of safer zone under section 6.

(3) On receipt of the application made under sub-section (2), the existing stone crusher units may be allowed to function till the grant or refusal of the license under the provisions of this Act or till three months from the date of receipt of application within which time the licensing authority shall dispose of such application after due verification of the location and fulfilment of other conditions of licence.

(4) On grant of licence under sub-section (3), the existing stone crushers shall be shifted to the safer zone within six months.

**4. Application for license.-** (1)Every application for grant or renewal of license to carry on the business of stone crushing under this Act shall be made to the licensing authority in such form, in such manner, accompanied by such documents and such fees as may be prescribed. An application for renewal of license shall be made to the licencing authority three months before the expiry of the license.

(2) On receipt of application for grant or renewal of licence, the Licencing Authority shall cause inspection of the location and after verifying the fulfilment of other conditions of licence grant or reject the application within three months from the date of application.

**5. Term of license.-** A license shall be valid for a period of three years and may be renewed for a further period of three years subject to fulfilment of the conditions laid down under this Act or the rules made thereunder.

**Explanation.-** Where a license has been granted in the middle of a year, for the purpose of computing the term of license, the remaining part of the year shall be deemed to be a year.

**6. Conditions for grant of license.-** License shall be granted under this Act subject to the following conditions, namely:-

(1) The stone crusher shall not be established outside the safer zone;

(2) The safer zone shall be within a location of,-

(a) two kilometres away from the National Highways, habitats, temples, schools and river;

(b) one and a half kilometres away from the State Highway;

(c) five hundred meters away from the link roads;

(d) eight kilometres away from the limits of Municipal Corporations;

(e) four kilometres away from the limits of District Head Quarters;

(f) two kilometres away from the boundary limits of a Taluk Head Quarters;

(g) one kilometre away from the limits of an inhabited village or any land recorded as forest in Government records or any private land which is shown as cultivable land in the revenue records;

(3) No two safer zones shall be located within a radius of fifty kilometres.

(4) The Licencing Authority shall, within a period of four months from the date of commencement of this Act, identify and declare the safer zones by notification specifying the area and limits within their jurisdiction:

Provided that the Licencing Authority may in exceptional circumstances and for the reasons to be recorded in writing may relax any of the condition or conditions specified in sub-section (2) for the purpose of declaration of safer zones.

(5) The Licencing Authority shall send the proposal of declaration of safer zone under sub-section (4), to the pollution control Board for its certification. On receipt of the proposal by the pollution control Board or where three months have lapsed from the date of the proposal and no communication has been received by the Licencing Authority, the Licencing Authority shall by notification declare the safer zone in accordance with the proposal.

(6) Each stone crusher unit shall be located in a minimum area of one acre of land including stone crushers belonging to State Government or the Panchayat as the case may be.

(7) Each unit shall abide by the pollution control measures or such other safeguards as may be prescribed by the Karnataka State Pollution Control Board from time to time.

(8) Each unit shall conform to the Noise (Regulations and Control) Rules, 2000.

(9) The unit shall abide by the provisions of the Air (Prevention and Control of Pollution) Act, 1981 and the Environment Protection Act, 1986 and rules made thereunder.

**7. License for stone crushers for Government projects.-** Notwithstanding anything contained in this Act, license for temporary stone crushers exclusively for construction of National Highway, State Highway or any other infra-structural Government project and Government approved Public Private Partnership Projects may be granted for the project period on their fulfilling the provisions of the Air (Prevention and Control of Pollution) Act, 1981 and Environmental Protection Act, 1986 and Rules made thereunder.

**8. Establishment of District Stone Crushers Regulation Committee.-** (1) On and from the date of commencement of this Act, there shall be established in each of the Revenue District a District Stone Crushers Regulation Committee consisting of the following, namely:-

| | | |
|---|---|---|
| (a) | The Deputy Commissioner of the District | Chairman |
| (b) | Superintendent of Police of the District | Member ex-officio |
| (c) | CEO of Zilla Panchayath of the District | Member ex-officio |
| (d) | Deputy Conservator of Forest of the District | Member ex-officio |
| (e) | Environmental Officer of the District | Member ex-officio |
| (f) | Assistant Director of Fire Force of the District | Member ex-officio |
| (g) | Assistant Director of Factories and Boilers of the District | Member ex-officio |
| (h) | Labour Officer in charge of the District | Member ex-officio |
| (i) | District Health Officer | Member ex-officio |
| (j) | Deputy Director / Senior Geologist, Department of Mines and Geology to be appointed by the Chairman | Member-Secretary |

(2) The District Stone Crushers Regulation Committee shall assist the licensing authority and shall be responsible for the supervision of the licensed premises. The license shall be issued by the licensing authority after obtaining No Objection Certificate from the concerned departments including the Karnataka State Pollution Control Board, the Forest and the Revenue departments and in accordance with the rules as may be prescribed.

**9. Inspection and regulation of the licensed Stone Crushers.-** The Deputy Commissioner or an officer authorized by the Deputy Commissioner shall inspect each stone crusher at least once a year.

**10. Cancellation of license.-** The license issued under this Act may be cancelled suo-moto for the reasons to be recorded in writing by the Licensing Authority or on considering any complaint or application filed by any person to the effect that the license granted is not in accordance with the provisions of this Act and rules or that the licensee has violated the conditions of license:

Provided that no order of canceling the license shall be made under this section without giving an opportunity of being heard to the licensee or a person aggrieved by such cancellation.

**11. Power to issue directions.-** Subject to the provisions of this Act and to any directions that the Central Government or State Government may give in this behalf, the Licensing Authority may in the exercise of its powers and performance of its functions under this Act, issue any directions in writing to any person, officer or authority, and such person, officer or authority shall be bound to comply with such directions.

**Explanation.-** The power to issue directions under this section shall include, the power to direct,-

(a) the closure, prohibition or regulation of any stone crusher; or

(b) the stoppage or regulation of supply of electricity, water or any other service to the stone crusher.

**12. Victim Relief Fund**.- (1) The Committee shall have and maintain a separate fund called Victim Relief Fund, to which shall be credited all moneys received by it through licence fee, fines and penalties levied by it, which shall be held, applied and disbursed in accordance with the provisions of this Act, and rules made thereunder.

(2) The Chairman and the member secretary of the Committee shall operate the Victim Relief Fund in accordance with the rules made under this Act.

(3) The Victim Relief Fund shall be kept in any of the Nationalised Bank in such manner as may be prescribed.

(4) The Committee shall receive complaints or applications or claim from the victims on account of the health hazard caused by the stone crushers within a period of three months from the date the health hazard has occurred and consider such applications and determine the amount of relief to be granted to each of the applicant within a period of three months from the date of receipt of the application in accordance with the rules as may be prescribed:

Provided that the Committee may entertain such complaints or applications after the expiry of three months if it is satisfied that the complainant or applicant had sufficient cause for not submitting the complaint or application in time.

(5) The Committee may also direct the licence holder to pay such amount to such of the victims as determined under sub-section (4) in addition to the amount paid by it, within a period of two months from the date of the Order failing which the license shall be cancelled.

**13. Accounts and Audit.-** (1) The Accounts of all receipts and expenditure of the Victim Relief Fund shall be kept in such manner and in such form as may be prescribed.

(2) The accounts of the Victim Relief Fund shall be subject to audit annually by the State Accounts Department and the audit report shall be forwarded annually to the State Government.

**14. Annual report.-** The committee shall prepare for every year a report of its activities under this Act and submit the same to the State Government in such form on or before such date as may be prescribed and the State Government shall cause the same to be laid before each house of the legislature.

**15. Appeals against the orders of the Licensing Authority.-** (1) The Regional Commissioner of the concerned region shall be the Appellate Authority of respective jurisdiction to whom appeals in respect of the orders passed by the licensing authority shall lie.

(2) Every appeal shall be presented within thirty days from the date on which the order appealed against was communicated to the person affected:

Provided that an appeal may be admitted after the said period of thirty days, if the appellant show sufficient cause that the appeal could not be presented in time.

(3) Every appeal shall be in the form of memorandum setting forth concisely the grounds of objection to the order and shall be accompanied by a copy of the order appealed against.

(4) The appeal shall be disposed off on hearing both sides within a period of three months.

**16. Penalties.-** (1) Whoever contravenes the conditions of license shall be punished with imprisonment for a term which may extend to two years or with fine which may extend to twenty-five thousand rupees or with both.

(2) Any rule made under any provision of this Act may provide that any contravention thereof shall be punishable with imprisonment for a term which may extend to one year, or with fine which may extend to five thousand rupees or with both and in the case of continuing contravention, with an additional fine which may extend to five hundred rupees for every day during which such contravention continues after conviction for the first such contravention.

**17. Cognizance of offences.-** (1) No court shall take cognizance of an offence punishable under this Act or any rules made thereunder except upon complaint in writing made by a person authorized in this behalf by the Licensing Authority.

(2) No court other than the Court of Judicial Magistrate first class shall try any offence punishable under this Act.

**18. Power to make rules.-** (1) The State Government may, after previous publication by notification, make rules for carrying out the purposes of this Act.

(2) Every rule made under this Act, shall be laid as soon as may be after it is made before each House of the State Legislature while it is in session for a total period of thirty days which may be comprised in one session or in two successive sessions, and if before the expiry of the session in which it is so laid or the session immediately following both Houses agree in making any modification in the rule or both Houses agree that the rule should not be made the rule shall thereafter have effect only in such modified form or be of no effect, as the case may be, so however that any such modification or annulment shall be without prejudice to the validity of anything previously done under that rule.

**19. Removal of difficulties.-** If any difficulty arises in giving effect to the provision of this Act, the State Government may, by order published in the official Gazette as the occasion may require do anything which appears to it be necessary to remove the difficulty.

**20. Repeal and savings.-** (1) The Karnataka Regulation of Stone Crushers Ordinance, 2011 (Karnataka Ordinance No.2 of 2011) is hereby repealed.

(2) Notwithstanding such repeal anything done or any action taken under the said Ordinance shall be deemed to have been done or taken under this Act.

**STATEMENT OF OBJECTS AND REASONS**

The Hon'ble High Court of Karnataka by its order dated:10.7.1998 in Writ Petition No.17078/1997 has directed the State Government to formulate a policy regulating the carrying on the business related to the crushing of stones by prescribing reasonable conditions including guidelines and licenses and their periodical renewals.

It is considered necessary to enact a legislation to provide for,-

(1) grant of licence for stone crushers;

(2) establishment of district stone crushers regulation committee;

(3) inspection of stone crushers;

(4) victims relief fund;

(5) appeals against the orders of Licensing Authority;

(6) penalties and certain other consequential matters.

As the matter was urgent and both the Houses of the Karnataka State Legislature were not in session, the Karnataka Regulation of Stone Crushers ordinance, 2011. (Karnataka ordinance No.2 of 2011) was promulgated on 07.09.2011.

This bill seeks to replace the said ordinance.

Hence the Bill.

**EXPLANATORY STATEMENT AS REQUIRED BY SUB-RULE (1) OF RULE 80 OF THE RULES OF PROCEDURE AND CONDUCT OF BUSINESS IN THE KARNATAKA LEGISLATIVE ASSEMBLY**

The Hon'ble High Court of Karnataka by its order dated:10.7.1998 in Writ Petition No.17078/1997 has directed the State Government to formulate a policy regulating the carrying on the business related to the crushing of stones by prescribing reasonable conditions including guidelines and licenses and their periodical renewals.

It is considered necessary to enact a legislation to provide for,-

1. grant of licence for stone crushers;
2. establishment of district stone crushers regulation committee;
3. inspection of stone crushers;
4. victims relief fund;
5. appeals against the orders of Licensing Authority;
6. penalties and certain other consequential matters.

As the matter was urgent and both the Houses of the Karnataka State Legislature were not in session, the Karnataka Regulation of Stone Crushers ordinance, 2011. (Karnataka ordinance No.2 of 2011) was promulgated on 07.09.2011.

This Bill seeks to replace the said ordinance.

**FINANCIAL MEMORANDUM**

There is no extra expenditure involved in the proposed Legislative measure.

**MEMORANDUM REGARDING DELEGATED LEGISLATION**

| | |
|---|---|
| **Clause 4:** | Empowers the State Government to make rules to prescribe License fee, the form of application for licence, renewal and the documents to be submitted along with the application. |
| **Clause 12:** | Sub-clause (2), empowers the State Government to make rules to operate the Victim Relief Fund.<br>Sub-clause (3) empowers the State Government to make rules to prescribe the manner in which Victim Relief Fund be kept in the Nationalised Banks. |

| | |
|---|---|
| | Sub-clause (4) empowers the State Government to make rules to prescribe the manner of determining quantum of relief to the victims |
| **Clause 13:** | Sub-clause (1) empowers the State Government to make rules to prescribe the manner of keeping the accounts and audit of the victim relief fund. |
| **Clause 14:** | Empowers the State Government to make rules to prepare Annual Report. |
| **Clause 18:** | Sub-clause (1) empowers the State Government to make rules after previous publication for carrying out the purposes of the Act. |

The proposed delegation of legislative power is normal in character.

**D.V.SADANANDA GOWDA**
CHIEF MINISTER

**P. OMPRAKASHA**
Secretary
Karnataka Legislative Assembly

**ವಿಶೇಷ ಪತ್ರಿಕೆ**

| ಭಾಗ – **IV-A** | ಬೆಂಗಳೂರು, ಮಂಗಳವಾರ, ಡಿಸೆಂಬರ್ ೧೩, ೨೦೧೧ (ಮಾರ್ಗಶಿರ ೨೨, ಶಕ ವರ್ಷ ೧೯೩೩) | ನಂ. ೯೭೫ |
|---|---|---|

## KARNATAKA LEGISLATIVE ASSEMBLY SECRETARIAT

**NOTIFICATION**

**No. KLA/LGA/42/Bill/2011, Bangalore, Dated: 13.12.2011**

The following Bill was introduced in Legislative Assembly on 13.12.2011.

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹನ್ನೊಂದನೇ ಅಧಿವೇಶನ**

## ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು ಮತ್ತು ಇತರ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದವುಗಳ ಮೀಸಲಾತಿ) (ತಿದ್ದುಪಡಿ) ವಿಧೇಯಕ, 2011

**(2011ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 42)**

ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು ಮತ್ತು ಇತರ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದವುಗಳ ಮೀಸಲಾತಿ) ಅಧಿನಿಯಮ, 1990ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇದರಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು ಮತ್ತು ಇತರ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದವುಗಳ ಮೀಸಲಾತಿ) ಅಧಿನಿಯಮ, 1990ನ್ನು (1991ರ ಕರ್ನಾಟಕ ಅಧಿನಿಯಮ 7) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ ;

ಇದು ಭಾರತ ಗಣರಾಜ್ಯದ ಅರವತ್ತೆರಡನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ :–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು ಮತ್ತು ಇತರ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದವುಗಳ ಮೀಸಲಾತಿ) (ತಿದ್ದುಪಡಿ) ಅಧಿನಿಯಮ, 2011 ಎಂದು ಕರೆಯತಕ್ಕದ್ದು.

(2) ಇದು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದ ಅಂಥ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 4ಇ ಮತ್ತು 4ಎಫ್ ಹೊಸ ಪ್ರಕರಣಗಳ ಸೇರ್ಪಡೆ.–** ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು ಮತ್ತು ಇತರ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದವುಗಳ ಮೀಸಲಾತಿ) ಅಧಿನಿಯಮ, 1990ರ (1991ರ ಕರ್ನಾಟಕ ಅಧಿನಿಯಮ 7) (ಇದರಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 4ಡಿ ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"4ಇ. ತಹಶೀಲ್ದಾರನು ಮತ್ತು ಪರಿಶೀಲನಾ ಸಮಿತಿಯು ಸಿವಿಲ್ ನ್ಯಾಯಾಲಯದ ಅಧಿಕಾರಗಳನ್ನು ಚಲಾಯಿಸುವುದು.–** ತಹಶೀಲ್ದಾರನು ಮತ್ತು ಪರಿಶೀಲನಾ ಸಮಿತಿಯು, ಈ ಅಧಿನಿಯಮದ ಅಡಿಯಲ್ಲಿ ವಿಚಾರಣೆ ನಡೆಸುವಾಗ, ಸಿವಿಲ್ ಪ್ರಕ್ರಿಯಾ ಸಂಹಿತೆ, 1908ರ ಅಡಿಯಲ್ಲಿ ನಿರ್ದಿಷ್ಟವಾಗಿ ಈ ಮುಂದಿನ ವಿಷಯಗಳಿಗೆ ಸಂಬಂಧಪಟ್ಟಂತೆ ದಾವೆಯ ವಿಚಾರಣೆಯ ಅವಧಿಯಲ್ಲಿ ಸಿವಿಲ್ ನ್ಯಾಯಾಲಯದ ಎಲ್ಲಾ ಅಧಿಕಾರಗಳನ್ನು ಹೊಂದಿಡಿತಕ್ಕದ್ದು, ಎಂದರೆ :–

(ಎ) ಯಾವೊಬ್ಬ ವ್ಯಕ್ತಿಯನ್ನು ಸಮನು ಮಾಡುವುದು ಮತ್ತು ಹಾಜರಾತಿಯನ್ನು ಒತ್ತಾಯಪಡಿಸುವುದು ಮತ್ತು ಪ್ರಮಾಣದ ಮೇಲೆ ಆತನನ್ನು ಪರೀಕ್ಷಿಸುವುದು;

(ಬಿ) ಯಾವುದೇ ದಾಖಲೆಯನ್ನು ಶೋಧಿಸುವುದು ಮತ್ತು ಹಾಜರುಪಡಿಸುವುದು;

(ಸಿ) ಅಫಿದಾವಿತ್ತುಗಳ ಮೇಲೆ ಸಾಕ್ಷ್ಯಗಳನ್ನು ಸ್ವೀಕರಿಸುವುದು;

(ಡಿ) ಯಾವುದೇ ನ್ಯಾಯಾಲಯ ಅಥವಾ ಕಚೇರಿಯಿಂದ ಯಾವುದೇ ಸಾರ್ವಜನಿಕ ದಾಖಲೆ ಅಥವಾ ಅದರ ನಕಲನ್ನು ಕಡ್ಡಾಯವಾಗಿ ಕೋರುವುದು;

(ಇ) ಸಾಕ್ಷಿಗಳನ್ನು ಅಥವಾ ದಾಖಲೆಗಳನ್ನು ಪರೀಕ್ಷಿಸುವುದಕ್ಕಾಗಿ ಕಮೀಷನ್‌ಗಳನ್ನು ಹೊರಡಿಸುವುದು; ಮತ್ತು

(ಎಫ್) ನಿಯಮಿಸಬಹುದಾದಂಥ ಯಾವುದೇ ಇತರ ವಿಷಯ.

**4ಎಫ್. ಡೆಪ್ಯೂಟಿ ಕಮೀಷನರ್‌ರಿಂದ ಪುನರೀಕ್ಷಣೆ.–** (1) ಡೆಪ್ಯೂಟಿ ಕಮೀಷನರನು, ಯಾವುದೇ ಸಮಯದಲ್ಲಿ ತಾನಾಗಿಯೇ ಆಗಲಿ ಅಥವಾ ನಿಯಮಿಸಲಾದ ಅವಧಿಯಲ್ಲಿ ತನಗೆ ಮಾಡಲಾದ ಅರ್ಜಿಯ ಮೇಲಾಗಲಿ 4ಎ ಪ್ರಕರಣದ ಅಡಿಯಲ್ಲಿ ತಹಶೀಲ್ದಾರನು ಅಥವಾ 4ಬಿ ಪ್ರಕರಣದ ಅಡಿಯಲ್ಲಿ ಅಸಿಸ್ಟೆಂಟ್ ಕಮೀಷನರನು ಕೈಗೊಂಡ ಯಾವುದೇ ತೀರ್ಮಾನ ಅಥವಾ ಹೊರಡಿಸಿದ ಆದೇಶದ ಸಂಬಂಧದಲ್ಲಿ ಅಂಥ ತೀರ್ಮಾನ ಅಥವಾ ಆದೇಶದ ಕಾನೂನು ಸಮ್ಮತತೆ, ಔಚಿತ್ಯದ ಬಗ್ಗೆ ತನಗೆ ಮನವರಿಕೆಯಾಗುವ ಉದ್ದೇಶಕ್ಕಾಗಿ ದಾಖಲೆಗಳನ್ನು ತರಿಸಬಹುದು ಮತ್ತು ಪರೀಕ್ಷಿಸಬಹುದು ಮತ್ತು ಯಾವುದೇ ಪ್ರಕರಣದಲ್ಲಿ ಯಾವುದೇ ಅಂಥ ತೀರ್ಮಾನ ಅಥವಾ ಆದೇಶವನ್ನು ಪರಿವರ್ತಿಸತಕ್ಕದ್ದು, ರದ್ದುಗೊಳಿಸತಕ್ಕದ್ದು, ಪರಿಷ್ಕರಿಸತಕ್ಕದ್ದು ಅಥವಾ ಪುನರ್ ಪರಿಗಣನೆಗಾಗಿ ಮುಂಡಿಸತಕ್ಕದ್ದು ಎಂದು ಡೆಪ್ಯೂಟಿ ಕಮೀಷನರನಿಗೆ ಕಂಡುಬಂದರೆ, ಆತನು ತದನುಸಾರವಾಗಿ ಆದೇಶಗಳನ್ನು ಹೊರಡಿಸಬಹುದು:

ಪರಂತು, ಡೆಪ್ಯೂಟಿ ಕಮೀಷನರನು ಯಾವೊಬ್ಬ ವ್ಯಕ್ತಿಗೆ ಅಹವಾಲನ್ನು ಹೇಳಿಕೊಳ್ಳಲು ಅವಕಾಶವನ್ನು ನೀಡಿದ ಹೊರತು, ಅಂಥ ವ್ಯಕ್ತಿಗೆ ಪ್ರತಿಕೂಲಕರವಾದ ಯಾವುದೇ ಆದೇಶವನ್ನು ಹೊರಡಿಸತಕ್ಕದ್ದಲ್ಲ.

(2) ಡೆಪ್ಯೂಟಿ ಕಮೀಷನರನು, (1)ನೇ ಉಪ ಪ್ರಕರಣದ ಅಡಿಯಲ್ಲಿನ ತನ್ನ ಅಧಿಕಾರಗಳನ್ನು ಚಲಾಯಿಸುವುದನ್ನು ಕಾಯ್ದಿರಿಸಿ, ಅಂಥ ಯಾವುದೇ ತೀರ್ಮಾನ ಅಥವಾ ಆದೇಶದ ಜಾರಿಯನ್ನು ತಡೆಹಿಡಿಯಬಹುದು."

**3. 5ಎ ಮತ್ತು 5ಬಿ ಪ್ರಕರಣಗಳ ಸೇರ್ಪಡೆ.–** ಮೂಲ ಅಧಿನಿಯಮದ 5ನೇ ಪ್ರಕರಣದ ತರುವಾಯ ಈ ಮುಂದಿನ ಪ್ರಕರಣಗಳನ್ನು ಸೇರಿಸತಕ್ಕದ್ದು, ಎಂದರೆ :–

**"5ಎ. ಸುಳ್ಳು ಜಾತಿ ಪ್ರಮಾಣ ಪತ್ರ ಅಥವಾ ಆದಾಯ ಮತ್ತು ಜಾತಿ ಪ್ರಮಾಣ ಪತ್ರ ಪಡೆದಿದ್ದಕ್ಕಾಗಿ ದಂಡಗಳು.–** ಯಾವೊಬ್ಬ ವ್ಯಕ್ತಿಯು,–

(ಎ) ಸುಳ್ಳು ಮಾಹಿತಿಯನ್ನು ಒದಗಿಸಿ ; ಅಥವಾ

(ಬ) ಸುಳ್ಳು ಹೇಳಿಕೆಯನ್ನು ನೀಡಿ ; ಅಥವಾ

(ಸಿ) ಯಾವುದೇ ಇತರ ಮೋಸದ ವಿಧಾನಗಳಿಂದ,

– ಜಾತಿ ಪ್ರಮಾಣಪತ್ರವನ್ನು ಅಥವಾ ಆದಾಯ ಮತ್ತು ಜಾತಿಯ ಪ್ರಮಾಣ ಪತ್ರವನ್ನು ಪಡೆದಿದ್ದರೆ, ಅಪರಾಧ ನಿರ್ಣಯವಾದ ತರುವಾಯ, ಆತನು ಆರು ತಿಂಗಳಿಗೆ ಕಡಿಮೆಯಲ್ಲದ, ಆದರೆ ಎರಡು ವರ್ಷಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಠಿಣ ಕಾರಾವಾಸದಿಂದ ಮತ್ತು ಒಂದು ಸಾವಿರ ರೂಪಾಯಿಗಳಿಗೆ ಕಡಿಮೆಯಲ್ಲದ, ಆದರೆ ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು:

ಪರಂತು, ನ್ಯಾಯಾಲಯವು, ಸಾಕಷ್ಟು ಮತ್ತು ವಿಶೇಷ ಕಾರಣಗಳನ್ನು ದಾಖಲು ಮಾಡಿ, ಕಡಿಮೆ ಅವಧಿಯ ಕಾರಾವಾಸ ಶಿಕ್ಷೆಯನ್ನು ಅಥವಾ ಕಡಿಮೆ ಜುಲ್ಮಾನೆಯನ್ನು ವಿಧಿಸಬಹುದು.

**5ಬಿ. ಸುಳ್ಳು ಜಾತಿ ಪ್ರಮಾಣ ಪತ್ರ ಅಥವಾ ಆದಾಯ ಮತ್ತು ಜಾತಿ ಪ್ರಮಾಣ ಪತ್ರ ನೀಡಿದ್ದಕ್ಕಾಗಿ ದಂಡ.–** ತಹಶೀಲ್ದಾರನು ಉದ್ದೇಶಪೂರ್ವಕವಾಗಿ ಸುಳ್ಳು ಜಾತಿ ಪ್ರಮಾಣ ಪತ್ರ ಅಥವಾ ಆದಾಯ ಮತ್ತು ಜಾತಿ ಪ್ರಮಾಣ ಪತ್ರವನ್ನು ನೀಡಿದ್ದರೆ, ಆತನು ಅಪರಾಧ ನಿರ್ಣಯವಾದ ತರುವಾಯ, ಆರು ತಿಂಗಳಿಗೆ ಕಡಿಮೆಯಲ್ಲದ ಆದರೆ ಎರಡು ವರ್ಷಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಠಿಣ ಕಾರಾವಾಸದಿಂದ ಮತ್ತು ಒಂದು ಸಾವಿರ ರೂಪಾಯಿಗಳಿಗೆ ಕಡಿಮೆಯಲ್ಲದ ಆದರೆ ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು :

ಪರಂತು, ನ್ಯಾಯಾಲಯವು ಸಾಕಷ್ಟು ಮತ್ತು ವಿಶೇಷ ಕಾರಣಗಳನ್ನು ದಾಖಲ್ಮಾಡಿ ಕಡಿಮೆ ಅವಧಿಯ ಕಾರಾವಾಸ ಶಿಕ್ಷೆಯನ್ನು ಅಥವಾ ಕಡಿಮೆ ಜುಲ್ಮಾನೆಯನ್ನು ವಿಧಿಸಬಹುದು."

4. **6ಎ, 6ಬಿ, 6ಸಿ, 6ಡಿ ಮತ್ತು 6ಇ ಪ್ರಕರಣಗಳ ಸೇರ್ಪಡೆ.–** ಮೂಲ ಅಧಿನಿಯಮದ 6ನೇ ಪ್ರಕರಣದ ತರುವಾಯ ಈ ಮುಂದಿನ ಪ್ರಕರಣಗಳನ್ನು ಸೇರಿಸತಕ್ಕದ್ದು, ಎಂದರೆ:–

**"6ಎ. ದುಷ್ಪ್ರೇರಕರಿಗೆ ದಂಡನೆ.–** ಈ ಅಧಿನಿಯಮದ ಅಡಿಯಲ್ಲಿ ದಂಡನೀಯವಾದ ಯಾವುದೇ ಅಪರಾಧಕ್ಕೆ ದುಷ್ಪ್ರೇರಿಸುವ ಯಾವೊಬ್ಬ ವ್ಯಕ್ತಿಯು, ಈ ಅಧಿನಿಯಮದಲ್ಲಿ ಅಂಥ ಅಪರಾಧಕ್ಕಾಗಿ ಉಪಬಂಧಿಸಿದ ದಂಡನೆಯಿಂದ ದಂಡಿತನಾಗತಕ್ಕದ್ದು.

**6ಬಿ. ಸಿವಿಲ್ ನ್ಯಾಯಾಲಯಗಳ ಅಧಿಕಾರ ವ್ಯಾಪ್ತಿಗೆ ಪ್ರತಿಷೇಧ.–** ಈ ಅಧಿನಿಯಮದ ಅಡಿಯಲ್ಲಿ ಯಾವೊಬ್ಬ ಅಧಿಕಾರಿಯು ಅಥವಾ ಪ್ರಾಧಿಕಾರವು ಹೊರಡಿಸಿದ ಯಾವುದೇ ಆದೇಶದ ಸಂಬಂಧದಲ್ಲಿ ಯಾವುದೇ ಸಿವಿಲ್ ನ್ಯಾಯಾಲಯವು ತನ್ನ ಅಧಿಕಾರ ವ್ಯಾಪ್ತಿಯನ್ನು ಹೊಂದಿರತಕ್ಕದ್ದಲ್ಲ ಮತ್ತು ಈ ಅಧಿನಿಯಮದ ಅಡಿಯಲ್ಲಿ ಮತ್ತು ಅಧಿನಿಯಮದಿಂದ ಪ್ರದತ್ತವಾದ ಯಾವುದೇ ಅಧಿಕಾರದ ಅನುಸರಣೆಯಲ್ಲಿ, ಅಂಥ ಅಧಿಕಾರಿ ಅಥವಾ ಪ್ರಾಧಿಕಾರವು ಈ ಅಧಿನಿಯಮದ ಅಡಿಯಲ್ಲಿ ಕೈಗೊಂಡ ಅಥವಾ ಕೈಗೊಳ್ಳುವ ಯಾವುದೇ ಕ್ರಮದ ಸಂಬಂಧದಲ್ಲಿ ನ್ಯಾಯಾಲಯವು ಯಾವುದೇ ತಡೆ ಅಥವಾ ನಿರ್ಬಂಧಕಾಜ್ಞೆಯನ್ನು ನೀಡತಕ್ಕದ್ದಲ್ಲ.

**6ಸಿ. ಪದವಿ ಮುಂತಾದವುಗಳ ರದ್ದಿಯಾತಿ.–** ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದಾಗ್ಯೂ, ಯಾವೊಬ್ಬ ವ್ಯಕ್ತಿಯು ಸುಳ್ಳು ಜಾತಿ ಪ್ರಮಾಣ ಪತ್ರ ಅಥವಾ ಸಂದರ್ಭಾನುಸಾರ ಸುಳ್ಳು ಆದಾಯ ಮತ್ತು ಜಾತಿ ಪ್ರಮಾಣ ಪತ್ರದ ಅಧಾರದ ಮೇಲೆ ಯಾವುದೇ ಶಿಕ್ಷಣ ಸಂಸ್ಥೆಯಲ್ಲಿ ಪ್ರವೇಶವನ್ನು ಪಡೆದ ತರುವಾಯ ಆರ್ಜಿಸಿದ ಯಾವುದೇ ಪದವಿ, ಡಿಪ್ಲೊಮೊ ಅಥವಾ ಇತರ ಯಾವುದೇ ವಿದ್ಯಾರ್ಹತೆಯನ್ನು, ಪಡೆದ ಜಾತಿ ಪ್ರಮಾಣ ಪತ್ರ ಅಥವಾ ಸಂದರ್ಭಾನುಸಾರ, ಆದಾಯ ಮತ್ತು ಜಾತಿ ಪ್ರಮಾಣ ಪತ್ರದ ರದ್ದತಿಯ ತರುವಾಯ, ಹಿಂದಕ್ಕೆ ಪಡೆಯತಕ್ಕದ್ದು.

**6ಡಿ. ಅಧಿನಿಯಮವು ಇತರ ಕಾನೂನುಗಳ ಮೇಲೆ ಅಧ್ಯಾರೋಹಿ ಪರಿಣಾಮ ಹೊಂದಿರುವುದು.–** ಈ ಅಧಿನಿಯಮದ ಉಪಬಂಧಗಳು, ಪ್ರಸ್ತುತ ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನಲ್ಲಿ ಅಸಂಗತವಾಗಿರುವುದು ಏನೇ ಇದ್ದರೂ ಪರಿಣಾಮಕಾರಿಯಾಗಿರತಕ್ಕದ್ದು.

**6ಇ. ಅಧಿನಿಯಮವು, ಯಾವುದೇ ನ್ಯಾಯಾಲಯಗಳಲ್ಲಿ ನಿರ್ಧಾರವಾದ ನಿರ್ದಿಷ್ಟ ಪ್ರಕರಣಗಳ ಅನ್ವಯತೆ ಮೇಲೆ ಅಧ್ಯಾರೋಹಿ ಪರಿಣಾಮ ಹೊಂದಿರುವುದು.–** ಈ ಅಧಿನಿಯಮದ ಉಪಬಂಧಗಳು, ಯಾವುದೇ ನ್ಯಾಯಾಲಯಗಳಿಂದ ನಿರ್ಧಾರವಾದ ಯಾವುದೇ ಪ್ರಕರಣಗಳಲ್ಲಿ ಏನೇ ಇದ್ದರೂ, ಪರಿಣಾಮಕಾರಿಯಾಗಿರತಕ್ಕದ್ದು."

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು ಮತ್ತು ಇತರ ಹಿಂದುಳಿದ ವರ್ಗಗಳ ಸದಸ್ಯರುಗಳ ಸಲುವಾಗಿ ಅವರಿಗೆ ಸಾಕಷ್ಟು ಪ್ರಾತಿನಿಧ್ಯವನ್ನು ನೀಡುವ ದೃಷ್ಟಿಯಿಂದ, ರಾಜ್ಯ ಸಿವಿಲ್ ಸೇವೆಗಳಲ್ಲಿ ಮತ್ತು ಸಾರ್ವಜನಿಕ ವಲಯದಲ್ಲಿಯ ಉದ್ಯಮಗಳಲ್ಲಿ ನೇಮಕಾತಿ ಅಥವಾ ಹುದ್ದೆಗಳ ಮೀಸಲಾತಿಗಾಗಿ ಮತ್ತು ರಾಜ್ಯ ಸರ್ಕಾರವು ಸ್ಥಾಪಿಸಿರುವ ಅಥವಾ ನಿರ್ವಹಿಸುತ್ತಿರುವ ಅಥವಾ ಅನುದಾನ ನೀಡುತ್ತಿರುವ ವಿಶ್ವವಿದ್ಯಾನಿಲಯಗಳಲ್ಲಿ ಮತ್ತು ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶ ಪಡೆಯುವುದಕ್ಕಾಗಿ ಉಪಬಂಧ ಕಲ್ಪಿಸಲು ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು ಮತ್ತು ಇತರ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದವುಗಳ ಮೀಸಲಾತಿ) ಅಧಿನಿಯಮ, 1990ನ್ನು ಅಧಿನಿಯಮಿಸಲಾಯಿತು. ಅನೇಕ ಪ್ರಕರಣಗಳಲ್ಲಿ ನೀಡಿಕೆ ಪ್ರಾಧಿಕಾರಿಗಳ ಪರೋಕ್ಷ ಸಮ್ಮತಿಯಿಂದ ಸುಳ್ಳು ಜಾತಿ ಪ್ರಮಾಣ ಪತ್ರ ಮತ್ತು ಆದಾಯ ಮತ್ತು ಜಾತಿ ಪ್ರಮಾಣ ಪತ್ರಗಳನ್ನು ಪಡೆದುಕೊಳ್ಳುತ್ತಿರುವುದು ಮತ್ತು ಅದರಿಂದಾಗಿ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು ಮತ್ತು ಇತರ ಹಿಂದುಳಿದ ವರ್ಗಗಳ ಸದಸ್ಯರಿಗೆ ದೊರೆಯುತ್ತಿದ್ದ ಮೀಸಲಾತಿ ಪ್ರಯೋಜನದಿಂದ ಅವರು ವಂಚಿತರಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆ.

ಆದ್ದರಿಂದ ಈ ಮುಂದಿನವುಗಳ ಸಲುವಾಗಿ ಉಪಬಂಧಿಸಲು ಸದರಿ ಅಧಿನಿಯಮಕ್ಕೆ ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ,–

(i) ಸಿವಿಲ್ ನ್ಯಾಯಾಲಯದ ಕೆಲವು ಅಧಿಕಾರಗಳನ್ನು, ಪರಿಶೀಲನಾ ಸಮಿತಿಗೆ ಮತ್ತು ತಹಶೀಲ್ದಾರರಿಗೆ ವಹಿಸಿಕೊಡುವುದು ;

(ii) ಸುಳ್ಳು ಜಾತಿ ಪ್ರಮಾಣ ಪತ್ರ ಅಥವಾ ಆದಾಯ ಮತ್ತು ಜಾತಿ ಪ್ರಮಾಣ ಪತ್ರಗಳನ್ನು ಪಡೆಯುವುದಕ್ಕಾಗಿ ಮತ್ತು ಅಂಥ ಪ್ರಮಾಣ ಪತ್ರಗಳನ್ನು ನೀಡುವುದಕ್ಕಾಗಿ ಕೂಡ ದಂಡಗಳನ್ನು ವಿಧಿಸುವುದು ;

(iii) ಅಪರಾಧಗಳ ಸಂಕ್ಷಿಪ್ತ ಅಧಿವಿಚಾರಣೆ ನಡೆಸುವುದು ;

(iv) ಸಿವಿಲ್ ನ್ಯಾಯಾಲಯದ ಅಧಿಕಾರ ವ್ಯಾಪ್ತಿಯನ್ನು ಪ್ರತಿಷೇಧಿಸುವುದು ;

(v) ಒಬ್ಬ ವ್ಯಕ್ತಿಯು, ಸುಳ್ಳು ಜಾತಿ ಪ್ರಮಾಣ ಪತ್ರ ಅಥವಾ ಆದಾಯ ಮತ್ತು ಜಾತಿ ಪ್ರಮಾಣ ಪತ್ರದ ಆಧಾರದ ಮೇಲೆ ಒಂದು ಶಿಕ್ಷಣ ಸಂಸ್ಥೆಯಲ್ಲಿ ಪ್ರವೇಶ ಪಡೆದು ಆರ್ಜಿಸಿದ ಪದವಿಯನ್ನು ರದ್ದುಗೊಳಿಸುವುದು.

ಇತರ ಕೆಲವು ಪ್ರಾಸಂಗಿಕ ಉಪಬಂಧಗಳನ್ನು ಸಹ ಮಾಡಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಕ್ರಮದಿಂದಾಗಿ ಯಾವುದೇ ಹೆಚ್ಚಿನ ವೆಚ್ಚ ಉಂಟಾಗುವುದಿಲ್ಲ.

**ಎ. ನಾರಾಯಣಸ್ವಾಮಿ**
ಸಮಾಜ ಕಲ್ಯಾಣ ಮತ್ತು ಬಂದೀಖಾನೆ ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**ಅನುಬಂಧ**

**xx** **xx** **xx**

**ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು ಮತ್ತು ಇತರ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದವುಗಳ ಮೀಸಲಾತಿ) ಅಧಿನಿಯಮ, 1990ರ (1991ರ ಕರ್ನಾಟಕ ಅಧಿನಿಯಮ 7) ಉದ್ಧೃತ ಭಾಗ.**

**xx** **xx** **xx**

**4ಡಿ. ಅಪೀಲು:-** (1) 4ಸಿ ಪ್ರಕರಣದ ಅಡಿಯಲ್ಲಿ ಪರಿಶೀಲನಾ ಸಮಿತಿಯು ಹೊರಡಿಸಿದ ಆದೇಶದಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು, ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ,-

(i) ಪರಿಶೀಲನಾ ಪ್ರಮಾಣ ಪತ್ರವು ಅನುಸೂಚಿತ ಜಾತಿಗಳಿಗೆ ಸೇರಿದ ವ್ಯಕ್ತಿಗೆ ಸಂಬಂಧಿಸಿದ್ದ ಸಂದರ್ಭದಲ್ಲಿ ಸಮಾಜ ಕಲ್ಯಾಣ ಆಯುಕ್ತರು / ನಿರ್ದೇಶಕರಿಗೆ;

(ii) ಪರಿಶೀಲನಾ ಪ್ರಮಾಣ ಪತ್ರವು ಅನುಸೂಚಿತ ಬುಡಕಟ್ಟುಗಳಿಗೆ ಸೇರಿದ ವ್ಯಕ್ತಿಗೆ ಸಂಬಂಧಿಸಿದ್ದ ಸಂದರ್ಭದಲ್ಲಿ ಬುಡಕಟ್ಟು ಕಲ್ಯಾಣ ನಿರ್ದೇಶಕರಿಗೆ;

(iii) ಪರಿಶೀಲನಾ ಪ್ರಮಾಣ ಪತ್ರವು ಇತರ ಹಿಂದುಳಿದ ವರ್ಗಗಳಿಗೆ ಸೇರಿದ ವ್ಯಕ್ತಿಗೆ ಸಂಬಂಧಿಸಿದ್ದ ಸಂದರ್ಭದಲ್ಲಿ ಹಿಂದುಳಿದ ವರ್ಗಗಳ ಇಲಾಖೆಯ ನಿರ್ದೇಶಕರಿಗೆ,

- ನಿಯಮಿಸಬಹುದಾದಂಥ ನಮೂನೆಯಲ್ಲಿ ಮತ್ತು ಅಂಥ ವಿಧಾನದಲ್ಲಿ ಹಾಗೂ ಅಂಥ ಶುಲ್ಕದ ಸಂದಾಯದೊಡನೆ ಅಪೀಲನ್ನು ಸಲ್ಲಿಸಬಹುದು.

(2) ಅಪೀಲು ಪ್ರಾಧಿಕಾರವು ಉಭಯ ಪಕ್ಷಕಾರರಿಗೆ ತಮ್ಮ ಅಹವಾಲನ್ನು ಹೇಳಿಕೊಳ್ಳಲು ಒಂದು ಅವಕಾಶವನ್ನು ಕೊಟ್ಟ ತರುವಾಯ ತಾನು ಸೂಕ್ತವೆಂದು ಭಾವಿಸಬಹುದಾದಂಥ ಆದೇಶವನ್ನು ಹೊರಡಿಸತಕ್ಕದ್ದು.

**5. ದಂಡ.-** ಈ ಅಧಿನಿಯಮದ ಉಪಬಂಧಗಳನ್ನು ಅಥವಾ ಅದರ ಅಡಿಯಲ್ಲಿ ರಚಿಸಲಾದ ನಿಯಮಗಳನ್ನು ಉಲ್ಲಂಘಿಸಿ, ಯಾವೊಬ್ಬ ನೇಮಕಾತಿ ಪ್ರಾಧಿಕಾರಿಯು ನೇಮಕ ಮಾಡಿದರೆ ಅಥವಾ ವಿಶ್ವವಿದ್ಯಾನಿಲಯದಲ್ಲಿ ಅಥವಾ ಶಿಕ್ಷಣ ಸಂಸ್ಥೆಯಲ್ಲಿ ಯಾವುದೇ ವ್ಯಾಸಂಗ ಕ್ರಮಕ್ಕೆ ಪ್ರವೇಶಾವಕಾಶ ನೀಡುವ ಯಾವೊಬ್ಬ ಪ್ರಾಧಿಕಾರಿಯು ಅಂಥ ಪ್ರವೇಶಾವಕಾಶ ನೀಡಿದರೆ, ಅವನು ಒಂದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಮತ್ತು ಆರು ತಿಂಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ದಂಡಿತನಾಗತಕ್ಕದ್ದು:

ಪರಂತು, ಈ ಪ್ರಕರಣದಲ್ಲಿರುವುದಾವುದೂ ರಾಜ್ಯಪಾಲರು ನೇಮಕಾತಿ ಪ್ರಾಧಿಕಾರಿಯಾಗಿರುವ ಯಾವುದೇ ಸೇವೆ ಅಥವಾ ಹುದ್ದೆಗೆ ನೇಮಕ ಮಾಡಿಕೊಳ್ಳುವ ಸಂಬಂಧದಲ್ಲಿ ಅನ್ವಯಿಸತಕ್ಕದ್ದಲ್ಲ.

**xx** **xx** **xx**

6. **ಅಪರಾಧಗಳ ಸಂಜ್ಞಾನ.-** ಈ ಅಧಿನಿಯಮದ ಅಡಿಯಲ್ಲಿ ಒಂದು ಅಪರಾಧಕ್ಕಾಗಿ ಯಾವುದೇ ಅಭಿಯೋಜನೆಯನ್ನು, ರಾಜ್ಯ ಸರ್ಕಾರದಿಂದಲ್ಲದೆ ಅಥವಾ ರಾಜ್ಯ ಸರ್ಕಾರದ ಮಂಜೂರಾತಿಯಿಲ್ಲದೆ, ಹೂಡತಕ್ಕದ್ದಲ್ಲ.

**xx** **xx** **xx**

## KARNATAKA LEGISLATIVE ASSEMBLY

### THIRTEENTH LEGISLATIVE ASSEMBLY

### ELEVENTH SESSION

# THE KARNATAKA SCHEDULED CASTES, SCHEDULED TRIBES AND OTHER BACKWARD CLASSES (RESERVATION OF APPOINTMENT ETC.,) (AMENDMENT) BILL, 2011

### (L.A. Bill No. 42 of 2011)

A Bill further to amend the Karnataka Scheduled Castes, Scheduled Tribes and Other Backward Classes (Reservation of Appointment etc.,) Act, 1990.

Whereas it is expedient further to amend the Karnataka Scheduled Castes, Scheduled Tribes and Other Backward Classes (Reservation of Appointment etc.,) Act, 1990 (Karnataka Act 7 of 1991) for the purposes hereinafter appearing.

Be it enacted by the Karnataka State Legislature in the Sixty Second year of the Republic of India as follows:-

**1. Short title and commencement.-** (1) This Act may be called the Karnataka Scheduled Castes, Scheduled Tribes and Other Backward Classes (Reservation of Appointment etc.,) (Amendment) Act, 2011.

(2) It shall come into force on such date as the State Government may, by notification, appoint.

**2. Insertion of sections 4E and 4F.-** In the Karnataka Scheduled Castes, Scheduled Tribes and Other Backward Classes (Reservation of Appointment etc.,) Act, 1990 (Karnataka Act 7 of 1991) (hereinafter referred as the principal Act) after section 4D, the following shall be inserted, namely:-

**"4E Tahasildar and the Verification Committee to exercise the powers of the Civil Court.-** Tahasildar and the Verification Committee, while holding enquiry under this Act, shall have all the powers of a Civil Court while trying a suit under Code of Civil Procedure, 1908 (Central Act No. 5 of 1908) and in particular in respect of following matters, namely:-

(a) summoning and enforcing the attendance of any person and examining him on Oath;

(b) discovery and production of any document;

(c) receiving evidence on affidavits;

(d) requisitioning any public record or copy thereof from any Court or office;

(e) issuing commissions for the examination of witnesses or documents; and

(f) any other matter which may be prescribed;

**4F. Revision by Deputy Commissioner.-** (1) The Deputy Commissioner may at any time either suomoto or on an application made to him with in the prescribed period, call for and examine the records relating to any decision made or order passed by the Tahasildar under section 4A or the Assistant Commissioner under section 4B, for the purposes of satisfying himself as to the legality, propriety of such decision or order and if, in any case, it appears to the Deputy

Commissioner that any such decision or order shall be modified, annulled, revised or remitted for reconsideration, he may pass orders accordingly;

provided that the Deputy Commissioner shall not pass any order prejudicial to any person unless such person is given an opportunity of being heard.

(2) The Deputy Commissioner may, stay the execution of any such decision or order pending the exercise of his powers under sub-section (1) in respect thereof."

**3. Insertion of sections 5A and 5B.-** After section 5 of the principal Act, the following shall be inserted, namely:-

**"5A Penalties for obtaining false Caste Certificate or Income and Caste Certificate.-** Whoever has obtained a Caste Certificate or Income and Caste Certificate by;-

(a) furnishing false information; or

(b) filing a false statement; or

(c) any other fraudulent means.

shall on conviction be punishable with rigorous imprisonment for a term which shall not be less than six months but which may extend upto two years and with fine which shall not be less than one thousand rupees but which may extend upto five thousand rupees:

Provided that the Court may, for adequate and special reasons to be recorded, impose a sentence of imprisonment for a lesser term or lesser fine.

**5B. Penalty for issuing a false Caste Certificate or Income and Caste Certificate.-** If the Tahasildar intentionally issues a false Caste Certificate or Income and Caste Certificate, he shall on conviction, be punishable with rigorous imprisonment for a term which shall not be less than six months but which may extend upto two years and with fine which shall not be less than one thousand rupees but which may extend to five thousand rupees:

provided that the Court may, for adequate and special reasons to be recorded, impose a sentence of imprisonment for a lesser term or lesser fine."

**4. Insertion of section 6A, 6B, 6C, 6D and 6E.-** After section 6 of the principal Act, the following shall be inserted, namely:-

**"6A. Penalty for abettors.-** Whoever abets any offence punishable under this Act, shall be punished with the penalty provided for in this Act for such offence.

**6B. Bar of jurisdiction of Civil Court.-** No Civil Court shall have jurisdiction in respect of any order passed by any officer or authority under this Act and no stay or injunction shall be granted by a court in respect of any action taken or to be taken by such officer or authority under this Act in pursuance of any power conferred by or under this Act.

**6C. Cancellation of Degree etc.-** Notwithstanding anything contained in any other law for time being in force any Degree, diploma or any other educational qualifications acquired by a person after securing admission in any educational institution on the basis of a false caste certificate or as the case may be, a false income and caste certificate, shall stand withdrawn, on cancellation of caste certificate, or as the case may be income and caste certificate obtained by him.

**6D. Act to override other laws.-** The provisions of this Act shall have effect, notwithstanding anything inconsistent therewith contained in any other law for the time-being in force.

**6E. Act to override the applicability of decided specific cases in any of the courts.-** The provisions of this Act shall have effect, notwithstanding anything contained in any of the decided cases by any of the courts. "

**STATEMENT OF OBJECTS AND REASONS**

The Karnataka Scheduled Castes Scheduled Tribes and other Backward Classes (Reservation of Appointment etc.,) Act, 1990 was enacted to provide for reservation of appointment or posts in favour of the members of the Schedule Castes, Scheduled Tribes and other Backward Classes in the State Civil Services and establishments in public sector and for admission to the Universities and Educational Institutions established or maintained or aided by the State Government with a view to ensure adequate representation to them. It has come to the notice of the Government that there are many cases of obtaining false Caste and Income and Caste Certificates with the connivance of the issuing authorities and there by depriving benefit of reservation available to the members of the Scheduled Castes, Scheduled Tribes and other Backward Classes.

Therefore, it is considered necessary to amend the said Act to provide for;-

(i) conferment of certain powers of the Civil Court on the Verification Committee and the Tahsildar;

(ii) penalties for obtaining false Caste Certificate or Income and Caste Certificate and also for issuing such certificates;

(iii) summary trial of offences;

(iv) barring the jurisdiction of civil court;

(v) cancellation of a degree acquired by a person who had secured admission to an educational institution on the basis of a false caste certificate or Income and Caste Certificate.

Certain other consequential provisions are also made

Hence the Bill.

**FINANCIAL MEMORANDUM**

There is no extra expenditure involved in the proposed measure.

**A. NARAYANASWAMY**
Minister for Social Welfare & Prisons

**P. OMPRAKASHA**
Secretary
Karnataka Legislative Assembly

**ANNEXURE**

**Extract from the Karnataka Scheduled Castes, Scheduled Tribes and other Backward Classes (Reservation of Appointments, etc.,) Act, 1990 (Karnataka Act No.7 of 1991**)

**XX** **XX** **XX**

**4D. Appeal.-** (1) Any person aggrieved by an order passed by the Verification Committee under section 4C may, within thirty days from the date of receipt of the order appeal,-

(i) to the Commissioner / Director, Social Welfare in case the verification certificate relates to a person belonging to the Scheduled Castes;

(ii) to the Director, Tribal Welfare in case the verification certificate relates to a person belonging to the Scheduled Tribes;

(iii) to the Director, Backward classes Department, in case the verification certificate relates to a person belonging to other Backward Classes;

in such form and in such manner and on payment of such fee as may be prescribed.

(2) The Appellate Authority shall after giving to both the parties an opportunity of being heard pass such order in appeal as it deems fit.

**5. Penalty.-** If any appointing authority makes an appointment or any authority making admission to course of study in a university or any educational institution makes admission in contravention of the provisions of this Act or rules made thereunder, he shall be punishable with fine which may extend upto rupees one thousand and imprisonment not exceeding six months:

Provided that nothing contained in this section shall apply in relation to appointment to any service or post of which the appointing authority is the Governor.

**6. Cognizance of offences.-** No prosecution for an offence under this Act shall be instituted except by, or with the sanction of the State Government.

**XX** **XX** **XX**

**P. OMPRAKASHA**
Secretary
Karnataka Legislative Assembly

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಡಿಸೆಂಬರ್ ೧೩, ೨೦೧೧ (ಮಾರ್ಗಶಿರ ೨೨, ಶಕ ವರ್ಷ ೧೯೩೩) | ನಂ. ೯೨೬ |
|---|---|---|

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಗ್ರಾಅಪ 43 ಕೆಎಸ್ಎಸ್ 2011, ಬೆಂಗಳೂರು, ದಿನಾಂಕ: 13.12.2011**

ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ 1978 (1990ರ ಕರ್ನಾಟಕ ಅಧಿನಿಯಮ ಸಂ.14)ರ ಕಲಂ 3ರ ಉಪ ಕಲಂ (1) ಸಹವಾಚನ ಕಲಂ 8ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸಾಮಾನ್ಯ ಸೇವೆ (ಅಭಿವೃದ್ಧಿ ಶಾಖೆ ಹಾಗೂ ಸ್ಥಳೀಯ ಆಡಳಿತ ಶಾಖೆ) (ವೃಂದ ಮತ್ತು ನೇಮಕಾತಿ) ನಿಯಮಗಳು, 2008ಕ್ಕೆ ತಿದ್ದುಪಡಿ ತರಲು ಈ ಕೆಳಕಂಡ ನಿಯಮಗಳ ಕರಡನ್ನು ಕರ್ನಾಟಕ ಸರ್ಕಾರವು ರಚಿಸಲು ಪ್ರಸ್ತಾವಿಸಿದ್ದು, ಸದರಿ ಅಧಿನಿಯಮದ 3ನೇ ಪ್ರಕರಣದ (2)ನೇ ಉಪಪ್ರಕರಣದ ಖಂಡ (ಎ) ರಲ್ಲಿ ಅಗತ್ಯಪಡಿಸಲಾದಂತೆ, ಇದರಿಂದ ಬಾಧಿತರಾಗಬಹುದಾದಂತಹ ಎಲ್ಲಾ ವ್ಯಕ್ತಿಗಳ ಮಾಹಿತಿಗಾಗಿ ಪ್ರಕಟಿಸಲಾಗಿದ್ದು, ಸದರಿ ಕರಡು ನಿಯಮಗಳನ್ನು ಅಧಿಕೃತ ರಾಜ್ಯ ಪತ್ರದಲ್ಲಿ ಪ್ರಕಟವಾದ 15 ದಿನಗಳ ಅವಧಿಯ ನಂತರ, ಪರಿಗಣನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ತಿಳಿಸಿದೆ.

ಸದರಿ ಕರಡು ನಿಯಮಗಳ ಬಗ್ಗೆ ರಾಜ್ಯ ಸರ್ಕಾರವು ಯಾವುದೇ ವ್ಯಕ್ತಿಯಿಂದ ಆಕ್ಷೇಪಣೆ ಅಥವಾ ಸಲಹೆಗಳನ್ನು ಮೇಲೆ ನಿಗದಿಪಡಿಸಿದ ಅವಧಿಯೊಳಗೆ ಸ್ವೀಕರಿಸಿದಲ್ಲಿ ಅವುಗಳನ್ನು ರಾಜ್ಯ ಸರ್ಕಾರವು ಪರಿಶೀಲಿಸುವುದು. ಆಕ್ಷೇಪಣೆಗಳು ಹಾಗೂ ಸಲಹೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ, ಕರ್ನಾಟಕ ಸರ್ಕಾರ, ಬಹು ಮಹಡಿಗಳ ಕಟ್ಟಡ, ಬೆಂಗಳೂರು– 560 001, ಈ ವಿಳಾಸಕ್ಕೆ ಕಳುಹಿಸಬಹುದಾಗಿದೆ.

**ಕರಡು ನಿಯಮಗಳು**

1. **ಶೀರ್ಷಿಕೆ ಮತ್ತು ಪ್ರಾರಂಭ:–** (1) ಈ ನಿಯಮಗಳನ್ನು ಕರ್ನಾಟಕ ಸಾಮಾನ್ಯ ಸೇವೆ (ಅಭಿವೃದ್ಧಿ ಶಾಖೆ ಹಾಗೂ ಸ್ಥಳೀಯ ಆಡಳಿತ ಶಾಖೆ) (ವೃಂದ ಮತ್ತು ನೇಮಕಾತಿ) (ಎರಡನೇ ತಿದ್ದುಪಡಿ) ನಿಯಮಗಳು, 2011 ಎಂದು ಕರೆಯುವುದು.

(2) ಈ ನಿಯಮಗಳು ಅಧಿಕೃತ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

2. **ಅನುಸೂಚಿಯ ತಿದ್ದುಪಡಿ:–** ಕರ್ನಾಟಕ ಸಾಮಾನ್ಯ ಸೇವೆ (ಅಭಿವೃದ್ಧಿ ಶಾಖೆ ಹಾಗೂ ಸ್ಥಳೀಯ ಆಡಳಿತ ಶಾಖೆ) (ವೃಂದ ಮತ್ತು ನೇಮಕಾತಿ) ನಿಯಮಗಳು, 2008ರ ಅನುಸೂಚಿಯಲ್ಲಿ ಕ್ರ.ಸಂ. 4ರಲ್ಲಿನ ಉಪ ಕಾರ್ಯದರ್ಶಿ, ಪಂಚಾಯತ್ ರಾಜ್ (ಹಿರಿಯ ಶ್ರೇಣಿ) ವರ್ಗದ ಹುದ್ದೆಗಳಿಗೆ ಸಂಬಂಧಿಸಿದ ನಮೂದುಗಳಲ್ಲಿ –

(i) ಅಂಕಣ (4) ರಲ್ಲಿ "ಶೇಕಡ ಇಪ್ಪತ್ತೈದರಷ್ಟು ಹುದ್ದೆಗಳನ್ನು ಕರ್ನಾಟಕ ಆಡಳಿತ ಸೇವೆ (ಹಿರಿಯ ಶ್ರೇಣಿ) ಅಧಿಕಾರಿಗಳ ನಿಯೋಜನೆಯಿಂದ" ಎಂಬ ಪದಗಳೂ ಮತ್ತು ಸಂಖ್ಯೆಗಳ ಬದಲಾಗಿ "ಶೇಕಡ ಇಪ್ಪತ್ತೆರಡರಷ್ಟು ಹುದ್ದೆಗಳನ್ನು ಕರ್ನಾಟಕ ಆಡಳಿತ ಸೇವೆ (ಹಿರಿಯ ಶ್ರೇಣಿ) ಅಧಿಕಾರಿಗಳ ನಿಯೋಜನೆಯಿಂದ ಮತ್ತು ಶೇಕಡ ಮೂರರಷ್ಟು ಆದರೆ ಎರಡು ಹುದ್ದೆಗಳಿಗಿಂತ ಹೆಚ್ಚಿಲ್ಲದಂತೆ ಅಭಿವೃದ್ಧಿ ಆಯುಕ್ತರ ಸಿಬ್ಬಂದಿ ಶಾಖೆಯಲ್ಲಿರುವ ಉಪ ನಿರ್ದೇಶಕರು ಮತ್ತು ಪದನಿಮಿತ್ತ ಸರ್ಕಾರ ಅಧೀನ ಕಾರ್ಯದರ್ಶಿ ವೃಂದದಿಂದ ಮುಂಬಡ್ತಿ ನೀಡುವ ಮೂಲಕ" ಎಂಬ ಪದಗಳು ಮತ್ತು ಸಂಖ್ಯೆಗಳನ್ನು ಅಳವಡಿಸುವುದು.

(ii) ಅಂಕಣ (5)ರ ಈ ಕೆಳಕಂಡ ನಮೂದುಗಳನ್ನು ಅಳವಡಿಸುವುದು ಅದೇನೆಂದರೆ:–

**"ಉಪ ನಿರ್ದೇಶಕರು ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ ವೃಂದದಿಂದ ಮುಂಬಡ್ತಿ ನೀಡಲು.**

– ಅಭಿವೃದ್ಧಿ ಆಯುಕ್ತರ ಸಿಬ್ಬಂದಿ ಶಾಖೆಯಲ್ಲಿ ಉಪ ನಿರ್ದೇಶಕರು ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ ವೃಂದದಲ್ಲಿ ಕನಿಷ್ಠ 3 ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರತಕ್ಕದ್ದು"

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಯು. ಶಿವಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

## RURAL DEVELOPMENT AND PANCHAYAT RAJ SECRETARIAT

## NOTIFICATION

### No. RDP 43 KSS 2011, Bangalore, dated :13 -12-2011

The draft of the following rules further to amend the Karnataka General Service (Development Branch and Local Government Branch) (Cadre and Recruitment) Rules, 2008, which the Government of Karnataka proposes to make in exercise of the powers conferred by sub section(1) of Section 3 read with Section 8 of the Karnataka State Civil Services Act, 1978 (Karnataka Act 14 of 1990) is hereby published as required by clause (a) of sub-section(2) of Section 3 of the said Act, for the information of all persons likely to be affected thereby and notice is hereby given that the said draft will be taken into consideration after fifteen days from the date of publication of the draft in the Official Gazette.

Any objection or suggestion which may be received by the State Government from any person with respect to the said draft before the expiry of the period specified above will be considered by the State Government. Objections and suggestions may be addressed to the Principal Secretary to Government, Rural Development and Panchayat Raj Department, M.S. Buildings, Bangalore-560 001.

**DRAFT RULES**

1. **Title and Commencement:-** (1) These rules may be called as the Karnataka General Services (Development Branch and Local Government Branch) (Cadre and Recruitment) (Second Amendment) Rules, 2011.

(2) They shall come into force from the date of their publication in the Official Gazette.

**2. Amendment of the Schedule:-** In the Karnataka General Service (Development Branch and Local Government Branch) (Cadre and Recruitment) Rules, 2008, in the entries relating to the category of the post of Deputy Secretary, Panchayat Raj (Senior Scale) at serial number 4,-

(i) in column (4), for the words and figures "25 percent by deputation of K.A.S. (Senior Scale) Officers", the words and figures "twenty two percent by deputation of K.A.S. (Senior Scale) Officers; and three percent but not exceeding two posts, by promotion from the cadre of Deputy Director and Ex-officio Under Secretary to Government in the Development Commissioner Establishment," shall be substituted ; and

(ii) in column (5), the following shall be inserted at the end, namely,-

**"For promotion from the cadre of Deputy Director and Ex-Officio Under secretary.-** must have put in a service of not less than three years in the cadre of Deputy Director and Ex-officio Under Secretary in the Development Commissioner establishment."

By order and in the name of the Governor of Karnataka,

**S.U. SHIVAPPA**
Under Secretary to Government
Rural Development and Panchayat Raj Department


## ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಬುಧವಾರ, ಡಿಸೆಂಬರ್ ೧೪, ೨೦೧೧ (ಮಾರ್ಗಶಿರ ೨೩, ಶಕ ವರ್ಷ ೧೯೩೩) | ನಂ. ೯೨೮ |
|---|---|---|


## KARNATAKA LEGISLATIVE ASSEMBLY SECRETARIAT

### NOTIFICATION

### No. KLA/LGA/39/Bill/2011, Bangalore, Dated: 14.12.2011

The following Bill was introduced in Legislative Assembly on 14.12.2011.

## ಕರ್ನಾಟಕ ವಿಧಾನ ಸಭೆ

### ಹದಿಮೂರನೇ ವಿಧಾನ ಸಭೆ

### ಹನ್ನೊಂದನೇ ಅಧಿವೇಶನ

## ಕರ್ನಾಟಕ ಮೋಟಾರು ವಾಹನಗಳ ತೆರಿಗೆ (ಎರಡನೇ ತಿದ್ದುಪಡಿ) ವಿಧೇಯಕ, 2011

### (2011ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 39)

ಕರ್ನಾಟಕ ಮೋಟಾರು ವಾಹನಗಳ ತೆರಿಗೆ ಅಧಿನಿಯಮ, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಮೋಟಾರು ವಾಹನಗಳ ತೆರಿಗೆ ಅಧಿನಿಯಮ, 1957ನ್ನು (1957ರ ಕರ್ನಾಟಕ ಅಧಿನಿಯಮ 35) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೆರಡನೇ ವರ್ಷದಲ್ಲಿ ಕರ್ನಾಟಕ ರಾಜ್ಯದ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಮೋಟಾರು ವಾಹನಗಳ ತೆರಿಗೆ (ಎರಡನೇ ತಿದ್ದುಪಡಿ) ಅಧಿನಿಯಮ, 2011 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 3ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಮೋಟಾರು ವಾಹನಗಳ ತೆರಿಗೆ ಅಧಿನಿಯಮ, 1957ರಲ್ಲಿ (1957ರ ಕರ್ನಾಟಕ ಅಧಿನಿಯಮ 35) (ಇದರಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿತವಾಗಿದೆ) 3ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ,–

(i) ಮೊದಲನೇ ಪರಂತುಕದಲ್ಲಿ "ಮೋಟಾರು ಸೈಕಲ್‌ನ ಸಂದರ್ಭದಲ್ಲಿ" ಎಂಬ ಪದಗಳಿಗೆ ಮೊದಲು "ವರ್ಗಾವಣೆಯ ಮೇಲೆ ತಮ್ಮೊಡನೆ ಕರ್ನಾಟಕ ರಾಜ್ಯಕ್ಕೆ ತಂದಿರುವ ಮತ್ತು ಅವುಗಳಿಗೆ ಇತರ ರಾಜ್ಯಗಳಲ್ಲಿ ಅಥವಾ ಕೇಂದ್ರಾಡಳಿತ ಪ್ರದೇಶಗಳಲ್ಲಿ ಆಜೀವ ತೆರಿಗೆ ಅಥವಾ ಸಂದರ್ಭಾನುಸಾರವಾಗಿ ತ್ರೈಮಾಸಿಕ ತೆರಿಗೆ ಅಥವಾ ವಾರ್ಷಿಕ ತೆರಿಗೆಯನ್ನು ಈಗಾಗಲೇ ಪಾವತಿಸಲಾಗಿರುವ" ಎಂಬ ಪದಗಳನ್ನು ಸೇರಿಸತಕ್ಕದ್ದು.

(ii) ನಾಲ್ಕನೇ ಪರಂತುಕದಲ್ಲಿ, (ಬಿ) ಖಂಡದಲ್ಲಿ, "ಮೋಟಾರು ಕಾರುಗಳ ಸಂದರ್ಭದಲ್ಲಿ" ಎಂಬ ಪದಗಳಿಗೆ ಮೊದಲು "ವರ್ಗಾವಣೆಯ ಮೇಲೆ ತಮ್ಮೊಡನೆ ಕರ್ನಾಟಕ ರಾಜ್ಯಕ್ಕೆ ತಂದಿರುವ ಮತ್ತು ಅವುಗಳಿಗೆ ಇತರ ರಾಜ್ಯಗಳಲ್ಲಿ ಅಥವಾ ಕೇಂದ್ರಾಡಳಿತ ಪ್ರದೇಶಗಳಲ್ಲಿ ಆಜೀವ ತೆರಿಗೆ ಅಥವಾ ಸಂದರ್ಭಾನುಸಾರವಾಗಿ ತ್ರೈಮಾಸಿಕ ತೆರಿಗೆ ಅಥವಾ ವಾರ್ಷಿಕ ತೆರಿಗೆಯನ್ನು ಈಗಾಗಲೇ ಪಾವತಿಸಲಾಗಿರುವ" ಎಂಬ ಪದಗಳನ್ನು ಸೇರಿಸತಕ್ಕದ್ದು.

**3. 4ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 4ನೇ ಪ್ರಕರಣದ (1)ನೇ ಉಪ ಪ್ರಕರಣದಲ್ಲಿ, ಮೂರನೇ ಪರಂತುಕಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"ಅಲ್ಲದೆ, ಪರಂತು ಹೇರು ಭಾರವು 1500 ಕಿ.ಗ್ರಾಂ.ಗಳನ್ನು ಮೀರದ ಸರಕುಗಳ ಸಾಗಣೆಗಾಗಿ ಬಳಸಿದ ಆಟೋರಿಕ್ಷಾಗಳನ್ನು ಒಳಗೊಂಡಂತೆ ತ್ರಿಚಕ್ರ ವಾಹನಗಳು ಮತ್ತು ಬಾಡಿಗೆಗಾಗಿಯಾಗಲೀ ಅಥವಾ ಪ್ರತಿಫಲಕ್ಕಾಗಿಯಾಗಲೀ ಅಥವಾ ಅದಿಲ್ಲದೆಯೂ (ಚಾಲಕನನ್ನು ಹೊರತುಪಡಿಸಿ) ಮೂವರು ಪ್ರಯಾಣಿಕರನ್ನು ಸಾಗಿಸಲು ಅನುಮತಿಸಿದ ವಾಹನಗಳು, ಮೋಟಾರು ಸೈಕಲ್ಲು (ಯಂತ್ರ ಚಾಲಿತ ಮೋಟಾರು ಸ್ಕೂಟರು ಮತ್ತು ಸೈಕಲ್ಲು ಸೇರಿದಂತೆ) ಮತ್ತು ಜೀಪುಗಳನ್ನು ಒಳಗೊಂಡಂತೆ ವರ್ಗಾವಣೆಯ ಮೇಲೆ ತಮ್ಮೊಡನೆ ಕರ್ನಾಟಕ ರಾಜ್ಯಕ್ಕೆ ತಂದಿರುವ ಮತ್ತು ಅವುಗಳಿಗೆ ಇತರ ರಾಜ್ಯಗಳಲ್ಲಿ ಅಥವಾ ಕೇಂದ್ರಾಡಳಿತ ಪ್ರದೇಶಗಳಲ್ಲಿ ಆಜೀವ ತೆರಿಗೆ ಅಥವಾ ಸಂದರ್ಭಾನುಸಾರವಾಗಿ ತ್ರೈಮಾಸಿಕ ತೆರಿಗೆ ಅಥವಾ ವಾರ್ಷಿಕ ತೆರಿಗೆಯನ್ನು ಈಗಾಗಲೇ ಪಾವತಿಸಲಾಗಿರುವ ಮೋಟಾರು ಕಾರುಗಳು (ಕೇಂದ್ರ ಸರ್ಕಾರದ ನೌಕರರು, ರಕ್ಷಣಾ ಸಿಬ್ಬಂದಿ ಅಥವಾ ರಾಷ್ಟ್ರೀಕೃತ ಬ್ಯಾಂಕುಗಳೂ ಸೇರಿದಂತೆ ಭಾರತ ಸರ್ಕಾರದ ಒಡೆತನದ ಸಾರ್ವಜನಿಕ ವಲಯ ಉದ್ಯಮಗಳ ನೌಕರರನ್ನು ಹೊರತುಪಡಿಸಿ ಮತ್ತು 1997ರ ಏಪ್ರಿಲ್ ಮೊದಲನೇ ದಿವಸಕ್ಕೆ ಮುಂಚೆ ಅಥವಾ ಸಂದರ್ಭಾನುಸಾರವಾಗಿ ಕರ್ನಾಟಕ ಮೋಟಾರು ವಾಹನಗಳ ತೆರಿಗೆ (ತಿದ್ದುಪಡಿ) ಅಧಿನಿಯಮ, 2011ರ ಪ್ರಾರಂಭದ ದಿನಾಂಕಕ್ಕೆ ಮುಂಚೆ ಈಗಾಗಲೇ ಸಂದಾಯ ಮಾಡಿರುವ ತೆರಿಗೆಗೆ ಸಂಬಂಧಿಸಿದಂತೆ 3ನೇ ಪ್ರಕರಣದ (1)ನೇ ಉಪ ಪ್ರಕರಣದ ನಾಲ್ಕನೆಯ ಪರಂತುಕದಲ್ಲಿ ನಿರ್ದಿಷ್ಟಪಡಿಸಿದ ಐದು ಚದರ ಮೀಟರುಗಳು ಮೀರದ ನೆಲ ಅಂತಸ್ತನ್ನು ಹೊಂದಿರುವ ಆಮ್ನಿ ಬಸ್‌ಗಳು ಮತ್ತು ಖಾಸಗಿ ಸೇವಾ ವಾಹನಗಳ ಸಂದರ್ಭದಲ್ಲಿ, 3ನೇ ಪ್ರಕರಣದ (1)ನೇ ಉಪ–ಪ್ರಕರಣದ ಮೊದಲನೇ ಪರಂತುಕ ಅಥವಾ ಸಂದರ್ಭಾನುಸಾರವಾಗಿ ನಾಲ್ಕನೇ ಪರಂತುಕದಲ್ಲಿ ನಿರ್ದಿಷ್ಟಪಡಿಸಿದ ತೆರಿಗೆಯನ್ನು, (1)ನೇ ಉಪ–ಪ್ರಕರಣದ ಅಡಿಯಲ್ಲಿ ಸಂದಾಯ ಮಾಡಿದ ತೆರಿಗೆಯ ಅವಧಿಯು ಮುಕ್ತಾಯವಾದ ತರುವಾಯ ವಿಧಿಸತಕ್ಕದ್ದು ಮತ್ತು ಸದರಿ ಅವಧಿಯು ಮುಕ್ತಾಯವಾದ ದಿನಾಂಕದಿಂದ ಒಂದು ತಿಂಗಳ ಒಳಗಾಗಿ ಆ ತೆರಿಗೆಯನ್ನು ಸಂದಾಯ ಮಾಡತಕ್ಕದ್ದು."

**4. ಅನುಸೂಚಿಯ ತಿದ್ದುಪಡಿ.–** ಮೂಲ ಅಧಿನಿಯಮದ ಅನುಸೂಚಿಯಲ್ಲಿನ ಭಾಗ–ಎ ಯಲ್ಲಿ,–

(i) ಬಾಬು ಸಂಖ್ಯೆ 1ರಲ್ಲಿ, 2ನೇ ಅಂಕಣದಲ್ಲಿ "ಮೋಟಾರು ಸೈಕಲ್‌ಗಳು" ಎಂಬ ಪದಗಳಿಗೆ ಮೊದಲು "ವರ್ಗಾವಣೆಯ ಮೇಲೆ ತಮ್ಮೊಡನೆ ಕರ್ನಾಟಕ ರಾಜ್ಯಕ್ಕೆ ತಂದಿರುವ ಮತ್ತು ಅವುಗಳಿಗೆ ಇತರ ರಾಜ್ಯಗಳಲ್ಲಿ ಅಥವಾ ಕೇಂದ್ರಾಡಳಿತ ಪ್ರದೇಶಗಳಲ್ಲಿ ಆಜೀವ ತೆರಿಗೆ ಅಥವಾ ಸಂದರ್ಭಾನುಸಾರವಾಗಿ ತ್ರೈಮಾಸಿಕ ತೆರಿಗೆ ಅಥವಾ ವಾರ್ಷಿಕ ತೆರಿಗೆಯನ್ನು ಈಗಾಗಲೇ ಪಾವತಿಸಲಾಗಿರುವ" ಎಂಬ ಪದಗಳನ್ನು ಸೇರಿಸತಕ್ಕದ್ದು.

(ii) ಐಟಂ ಸಂಖ್ಯೆ 14ರಲ್ಲಿ, 2ನೇ ಅಂಕಣದಲ್ಲಿ, "ಮೋಟಾರು ಕಾರುಗಳು" ಎಂಬ ಪದಗಳಿಗೆ ಮೊದಲು "ವರ್ಗಾವಣೆಯ ಮೇಲೆ ತಮ್ಮೊಡನೆ ಕರ್ನಾಟಕ ರಾಜ್ಯಕ್ಕೆ ತಂದಿರುವ ಮತ್ತು ಅವುಗಳಿಗೆ ಇತರ ರಾಜ್ಯಗಳಲ್ಲಿ ಅಥವಾ ಕೇಂದ್ರಾಡಳಿತ ಪ್ರದೇಶಗಳಲ್ಲಿ ಆಜೀವ ತೆರಿಗೆ ಅಥವಾ ಸಂದರ್ಭಾನುಸಾರವಾಗಿ ತ್ರೈಮಾಸಿಕ ತೆರಿಗೆ ಅಥವಾ ವಾರ್ಷಿಕ ತೆರಿಗೆಯನ್ನು ಈಗಾಗಲೇ ಪಾವತಿಸಲಾಗಿರುವ" ಎಂಬ ಪದಗಳನ್ನು ಸೇರಿಸತಕ್ಕದ್ದು.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಯಾವುದೇ ಇತರ ರಾಜ್ಯಗಳಲ್ಲಿ ಅಥವಾ ಕೇಂದ್ರಾಡಳಿತ ಪ್ರದೇಶಗಳಲ್ಲಿ ಆಜೀವ ತೆರಿಗೆ ಅಥವಾ ಸಂದರ್ಭಾನುಸಾರವಾಗಿ ತ್ರೈಮಾಸಿಕ ಅಥವಾ ವಾರ್ಷಿಕ ತೆರಿಗೆಗಳನ್ನು ಈಗಾಗಲೇ ಸಂದಾಯ ಮಾಡಿದ್ದು ಅವರುಗಳು ಕರ್ನಾಟಕ ರಾಜ್ಯಕ್ಕೆ ವರ್ಗಾವಣೆಗೊಂಡು ತಮ್ಮ ವಾಹನಗಳನ್ನು ತಮ್ಮೊಂದಿಗೆ ತಂದಿರುವ ಕೇಂದ್ರ ಸರ್ಕಾರಿ ನೌಕರರು, ರಕ್ಷಣಾ ಸಿಬ್ಬಂದಿ ರಾಷ್ಟ್ರೀಕೃತ ಬ್ಯಾಂಕುಗಳನ್ನೂ ಒಳಗೊಂಡಂತೆ ಕೇಂದ್ರ ಸರ್ಕಾರದ ಉದ್ಯಮಗಳ ನೌಕರರಿಗೆ ತೆರಿಗೆ

ರಿಯಾಯಿತಿಯ ಸೌಲಭ್ಯವನ್ನು ವಿಸ್ತರಿಸಿ ಉಪಬಂಧ ಕಲ್ಪಿಸಲು ಕರ್ನಾಟಕ ಮೋಟಾರು ವಾಹನಗಳ ತೆರಿಗೆ ಅಧಿನಿಯಮ, 1957ಕ್ಕೆ ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಕ್ರಮದಿಂದ ರಾಜ್ಯದ ಸಂಚಿತ ನಿಧಿಗೆ ಯಾವುದೇ ಹೆಚ್ಚಿನ ವೆಚ್ಚವುಂಟಾಗುವುದಿಲ್ಲ

**ಆರ್. ಅಶೋಕ್**
ಗೃಹ ಮತ್ತು ಸಾರಿಗೆ ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**ಅನುಬಂಧ**

**ಕರ್ನಾಟಕ ಮೋಟಾರು ವಾಹನಗಳ ತೆರಿಗೆ ಅಧಿನಿಯಮ 1957ರ**
**(1957ರ ಕರ್ನಾಟಕ ಅಧಿನಿಯಮ 35ರ) ಉದ್ಧೃತ ಭಾಗ**

**XX XX XX**

**3. ತೆರಿಗೆ ವಿಧಿಸುವಿಕೆ.–** (1) ಅನುಸೂಚಿಯ ಭಾಗ 'ಎ'ದಲ್ಲಿ ನಿರ್ದಿಷ್ಟಪಡಿಸಿದ ದರಗಳಲ್ಲಿ ರಸ್ತೆಗಳ ಮೇಲಿನ ಉಪಯೋಗಕ್ಕಾಗಿ ಸೂಕ್ತವಾದ ಎಲ್ಲಾ ಮೋಟಾರು ವಾಹನಗಳ ಮೇಲೆ ತೆರಿಗೆಯನ್ನು ವಿಧಿಸತಕ್ಕದ್ದು:

ಪರಂತು, ಮೋಟಾರು ಸೈಕಲ್‌ನ ಸಂದರ್ಭದಲ್ಲಿ (ಯಂತ್ರ ಚಾಲಿತ ಮೋಟಾರು ಸ್ಕೂಟರು ಮತ್ತು ಸೈಕಲ್ ಸೇರಿದಂತೆ) ಕೇಂದ್ರ ಸರ್ಕಾರದ ನೌಕರರು ಅಥವಾ ರಕ್ಷಣಾ ಸಿಬ್ಬಂದಿ ಅಥವಾ ರಾಷ್ಟ್ರೀಕೃತ ಬ್ಯಾಂಕುಗಳೂ ಸೇರಿದಂತೆ ಭಾರತ ಸರ್ಕಾರದ ಒಡೆತನದಲ್ಲಿರುವ ಸಾರ್ವಜನಿಕ ವಲಯ ಉದ್ಯಮಗಳ ನೌಕರರು ಒಡೆತನ ಹೊಂದಿದವುಗಳನ್ನು ಹೊರತುಪಡಿಸಿ ತೆರಿಗೆಯನ್ನು ಅನುಸೂಚಿಯ ಭಾಗ ಎ1 ರಲ್ಲಿ ನಿರ್ದಿಷ್ಟಪಡಿಸಲಾದ ದರಗಳಲ್ಲಿ ವಿಧಿಸತಕ್ಕದ್ದು:

ಮತ್ತು ಪರಂತು,–

(ಎ) ಕೃಷಿಕರು ಒಡೆತನ ಹೊಂದಿರುವ ಮತ್ತು ಕೃಷಿಯು ಅವರ ಆದಾಯದ ಮೂಲವಾಗಿರುವ;

(ಬಿ) ವ್ಯವಸಾಯ ಸೇವಾ ಸಹಕಾರಿ ಸಂಘ ನಿಯಮಿತ, ರೈತ ಸೇವಾ ಸಹಕಾರಿ ಸಂಘ ನಿಯಮಿತ, ರೇಷ್ಮೆ ಹಾಗೂ ಕೃಷಿಯ ಹಾಗೂ ರೈತರ ಸಹಕಾರಿ ಸಂಘಗಳು, ದೊಡ್ಡ ಪ್ರಮಾಣದ ಸಹಕಾರಿ ಸಂಘಗಳು, ಸಹಕಾರಿ ಕೃಷಿ ಬ್ಯಾಂಕುಗಳು, ಸಣ್ಣ ಪ್ರಮಾಣದ ಸಹಕಾರಿ ಸಂಘಗಳು ಕೃಷಿ ಪತ್ತಿನ ಸಂಘಗಳು ವಿವಿದೋದ್ದೇಶ ಪತ್ತಿನ ಸಹಕಾರಿ ಸಂಘಗಳು, ದೊಡ್ಡ ಪ್ರಮಾಣ ಪ್ರಾಥಮಿಕ ಪತ್ತಿನ ಸಹಕಾರಿ ಸಂಘ, ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕು ಮತ್ತು ಸೇವೆಗಳ ಸಹಕಾರ ಸಂಘಗಳನ್ನು ಒಳಗೊಂಡ ಕೃಷಿ ಸಹಕಾರಿ ಸಂಘಗಳ ಒಡೆತನ ಹೊಂದಿರುವ; ಮತ್ತು

(ಸಿ) ಮೇಲಿನ (ಎ) ಮತ್ತು (ಬಿ) ಖಂಡಗಳ ಅಡಿಯಲ್ಲಿ ಬರದಿರುವ ಆದರೆ, ನಿಗದಿಪಡಿಸಬಹುದಾದಂಥ ಕೃಷಿ ಕಾರ್ಯವನ್ನು ನಡೆಸುವುದಕ್ಕಾಗಿ ನೇರವಾಗಿ ಉಪಯೋಗಿಸುವ,

–ಟ್ರ್ಯಾಕ್ಟರುಗಳು, ಟ್ರೈಲರುಗಳು ಮತ್ತು ಪವರ್ ಟಿಲ್ಲರ್‌ಗಳ ವಿಷಯದಲ್ಲಿ, ಅನುಸೂಚಿ ಎ2 ಭಾಗದಲ್ಲಿ ನಿರ್ದಿಷ್ಟಪಡಿಸಿದ ದರಗಳಲ್ಲಿ ತೆರಿಗೆಯನ್ನು ವಿಧಿಸತಕ್ಕದ್ದು.

ಮತ್ತೂ ಅಲ್ಲದೆ, ವಿಂಟೇಜ್ ಕಾರು ಮತ್ತು ಕ್ಲಾಸಿಕ್ ಕಾರಿನ ವಿಷಯದಲ್ಲಿ, ಅನುಸೂಚಿಯ ಎ3 ಭಾಗದಲ್ಲಿ ನಿರ್ದಿಷ್ಟಪಡಿಸಿದ ದರಗಳಲ್ಲಿ ತೆರಿಗೆಯನ್ನು ವಿಧಿಸತಕ್ಕದ್ದು.

ಮತ್ತೂ ಅಲ್ಲದೆ,–

(ಎ) ಹೇರು ಭಾರವು 1500 ಕಿ.ಗ್ರಾಂ.ಗಳನ್ನು ಮೀರದಿರುವ ಸರಕುಗಳನ್ನು ಸಾಗಿಸುವುದಕ್ಕಾಗಿ ಉಪಯೋಗಿಸಿದ ಆಟೋ ರಿಕ್ಷಾಗಳನ್ನು ಒಳಗೊಂಡು ತ್ರಿಚಕ್ರ ವಾಹನಗಳ ವಿಷಯದಲ್ಲಿ ಮತ್ತು ಬಾಡಿಗೆಗಾಗಿ ಅಥವಾ ಪ್ರತಿಫಲಕ್ಕಾಗಿ ಅಥವಾ ಅಲ್ಲದೆ ಉಪಯೋಗಿಸಲು, ಮೂರು ಪ್ರಯಾಣಿಕರನ್ನು (ಚಾಲಕರನ್ನು ಹೊರತುಪಡಿಸಿ) ಸಾಗಿಸುವುದಕ್ಕೆ ಅನುಮತಿಸಿದ ವಾಹನಗಳ ವಿಷಯದಲ್ಲಿ, ಅನುಸೂಚಿಯ 'ಎ4' ಭಾಗದಲ್ಲಿ ನಿರ್ದಿಷ್ಟಪಡಿಸಿದ ದರಗಳಲ್ಲಿ ತೆರಿಗೆಯನ್ನು ವಿಧಿಸತಕ್ಕದ್ದು.

(ಎಎ) ಭಾರ ಹೇರಿದಾಗ 1,500 ಕಿ.ಗ್ರಾಂ. ಮೀರಿದ ಆದರೆ 3,000 ಕಿ.ಗ್ರಾಂ. ಮೀರದ ಒಟ್ಟು ವಾಹನ ತೂಕವನ್ನು ಹೊಂದಿರುವ ಸರಕು ವಾಹನಗಳು ಸಂಬಂಧದಲ್ಲಿ, ಅವುಗಳನ್ನು ಬಾಡಿಗೆಗೆ ಅಥವಾ ಪ್ರತಿಫಲಕ್ಕಾಗಿ ಬಳಸಲಿ ಅಥವಾ ಬಳಸದಿರಲಿ, ಅನುಸೂಚಿಯ ಭಾಗ–ಎ6ರಲ್ಲಿ ನಿರ್ದಿಷ್ಟಪಡಿಸಿದ ದರಗಳಲ್ಲಿ ತೆರಿಗೆಯನ್ನು ವಿಧಿಸತಕ್ಕದ್ದು.

(ಬಿ) ಜೀಪುಗಳು ಒಳಗೊಂಡಂತೆ ಮೋಟಾರು ಕಾರುಗಳ ಸಂದರ್ಭದಲ್ಲಿ (ಕಂಪನಿಗಳು, ಕೇಂದ್ರ ಸರ್ಕಾರದ ನೌಕರರು ಅಥವಾ ರಕ್ಷಣಾ ಸಿಬ್ಬಂದಿ ಅಥವಾ ರಾಷ್ಟ್ರೀಕೃತ ಬ್ಯಾಂಕುಗಳೂ ಸೇರಿದಂತೆ ಭಾರತ ಸರ್ಕಾರದ ಒಡೆತನದಲ್ಲಿರುವ ಸಾರ್ವಜನಿಕ ವಲಯ ಉದ್ಯಮಗಳ ನೌಕರರನ್ನು ಹೊರತುಪಡಿಸಿ) ಮತ್ತು ಆಮ್ನಿ ಬಸ್ಸುಗಳು ಹಾಗೂ ಐದು ಚದರ ಮೀಟರುಗಳನ್ನು ಮೀರದ ನೆಲ ವಿಸ್ತೀರ್ಣವನ್ನು ಹೊಂದಿರುವ ಖಾಸಗಿ ಸೇವಾ ವಾಹನಗಳನ್ನು ಒಳಗೊಂಡು, ಅನುಸೂಚಿ ಎ5 ಭಾಗದಲ್ಲಿ ನಿರ್ದಿಷ್ಟಪಡಿಸಿದ ದರಗಳಲ್ಲಿ ತೆರಿಗೆಯನ್ನು ವಿಧಿಸತಕ್ಕದ್ದು.

**ವಿವರಣೆ:–** ಮೋಟಾರು ವಾಹನಗಳ ನೋಂದಣಿಗೆ ಪ್ರಮಾಣ ಪತ್ರವು ಚಾಲ್ತಿಯಲ್ಲಿರುವುದೋ ಆ ಮೋಟಾರು ವಾಹನವನ್ನು ಈ ಅಧಿನಿಯಮದ ಉದ್ದೇಶಗಳಿಗಾಗಿ ರಸ್ತೆಗಳ ಮೇಲಿನ ಉಪಯೋಗಕ್ಕಾಗಿ ಸೂಕ್ತವಾದ ವಾಹನವೆಂದು ಭಾವಿಸತಕ್ಕದ್ದು.

**ಟಿಪ್ಪಣಿ:–** ಮೇಲ್ಕಂಡ ವಿವರಣೆಯ ಉದ್ದೇಶಕ್ಕಾಗಿ ನೋಂದಣಿ ಪ್ರಮಾಣ ಪತ್ರವು ಮೋಟಾರು ವಾಹನಗಳ ಅಧಿನಿಯಮ, 1939ರ 38ನೇ ಪ್ರಕರಣದಲ್ಲಿ ಏನೇ ಅಡಕವಾಗಿದ್ದಾಗ್ಯೂ ಅರ್ಹತಾ ಪ್ರಮಾಣ ಪತ್ರವು ಪರಿಣಾಮಕಾರಿಯಾಗಿಲ್ಲದಿದ್ದರೂ ಆದರೆ, ಅಂಥ ಅರ್ಹತಾ ಪ್ರಮಾಣಪತ್ರವನ್ನು ರದ್ದುಗೊಳಿಸಿಲ್ಲದಿದ್ದರೆ ಚಾಲ್ತಿಯಲ್ಲಿರುವುದಾಗಿ ಭಾವಿಸತಕ್ಕದ್ದು.

**XX XX XX**

4. **ತೆರಿಗೆ ಸಂದಾಯ.–** (1) 3ನೇ ಪ್ರಕರಣದ ಮೇರೆಗೆ ವಿಧಿಸಿದ ತೆರಿಗೆಯನ್ನು ಮೋಟಾರು ವಾಹನದ ನೋಂದಾಯಿತ ಒಡೆಯ ಅಥವಾ ಅದರ ಸ್ವಾಧೀನತೆಯನ್ನು ಅಥವಾ ನಿಯಂತ್ರಣವನ್ನು ಹೊಂದಿರುವ ವ್ಯಕ್ತಿಯು ಅವನ ಇಷ್ಟಾನುಸಾರವಾಗಿ ಕಾಲು ವರ್ಷ, ಅರ್ಧ ವರ್ಷ ಅಥವಾ ವರ್ಷಕ್ಕಾಗಿ, ಸಂದರ್ಭಾನುಸಾರ ಅಂಥ ಕಾಲು ವರ್ಷ, ಅರ್ಧ ವರ್ಷ ಅಥವಾ ವರ್ಷವು ಪ್ರಾರಂಭವಾದಂದಿನಿಂದ ಹದಿನೈದು ದಿವಸಗಳೊಳಗೆ ಮುಂಗಡವಾಗಿ ವಿಧಿಸಿದ ತೆರಿಗೆಯನ್ನು ಸಂದಾಯ ಮಾಡತಕ್ಕದ್ದು:

ಪರಂತು, ಅನುಸೂಚಿಯ ಎ ಭಾಗದ 1 ಮತ್ತು 14(2)ನೇ ಬಾಬಿನಲ್ಲಿ ನಿರ್ದಿಷ್ಟಪಡಿಸಿದ ವಾಹನಗಳಿಗೆ ಸಂಬಂಧಿಸಿದಂತೆ, ಸರ್ಕಾರವು ಕಾಲಕಾಲಕ್ಕೆ ನಿರ್ದಿಷ್ಟಪಡಿಸಬಹುದಾದಂಥ ಷರತ್ತುಗಳಿಗೆ ಒಳಪಟ್ಟು ವಾರ್ಷಿಕವಾಗಿ ಸಂದಾಯ ಮಾಡತಕ್ಕದ್ದು.

ಮತ್ತೂ ಅಲ್ಲದೆ ಈ ಉಪ ಪ್ರಕರಣದಲ್ಲಿ ಒಳಗೊಂಡಿರುವುದು ಏನೇ ಇದ್ದರೂ, ಅಂಥ ತೆರಿಗೆಯನ್ನು, ಐದು ವರ್ಷಗಳು ಅಥವಾ ಹತ್ತು ವರ್ಷಗಳ ಅಂಥ ಅವಧಿಯ ಮೊದಲ ವರ್ಷದ ಪ್ರಾರಂಭದಿಂದ ಹದಿನೈದು ದಿನಗಳ ಒಳಗಾಗಿ ಐದು ವರ್ಷಗಳ ಅಥವಾ ಹತ್ತು ವರ್ಷಗಳ ಅವಧಿಗೆ ಅಂಥ ಒಡೆಯನು ಅಥವಾ ಆತನು ಆಯ್ಕೆ ಮಾಡಿಕೊಂಡ ವ್ಯಕ್ತಿಯ ಒಟ್ಟು ಮೊತ್ತದಲ್ಲಿ ಮುಂಗಡವಾಗಿ ಸಂದಾಯ ಮಾಡಬಹುದು.

ಅಲ್ಲದೆ, ಪರಂತು ಹೇರು ಭಾರವು 1500 ಕಿ.ಗ್ರಾಂ.ಗಳನ್ನು ಮೀರದ ಸರಕುಗಳ ಸಾಗಣೆಗಾಗಿ ಬಳಸಿದ ಆಟೋ ರಿಕ್ಷಾಗಳನ್ನು ಒಳಗೊಂಡಂತೆ ತ್ರಿಚಕ್ರ ವಾಹನಗಳು ಮತ್ತು ಬಾಡಿಗೆಗೆ ಅಥವಾ ಪ್ರತಿಫಲಕ್ಕಾಗಿ ಅಥವಾ ಅದಿಲ್ಲದೆಯೂ (ಚಾಲಕನನ್ನು ಹೊರತುಪಡಿಸಿ) ಮೂವರು ಪ್ರಯಾಣಿಕರನ್ನು ಸಾಗಿಸಲು ಅನುಮತಿಸಿದ ವಾಹನಗಳು, ಜೀಪುಗಳನ್ನು ಒಳಗೊಂಡಂತೆ ಮೋಟಾರು ಕಾರುಗಳು (ಕೇಂದ್ರ ಸರ್ಕಾರದ ನೌಕರರು ಅಥವಾ ರಕ್ಷಣಾ ಸಿಬ್ಬಂದಿ ಅಥವಾ ರಾಷ್ಟ್ರೀಕೃತ ಬ್ಯಾಂಕುಗಳೂ ಸೇರಿದಂತೆ ಭಾರತ ಸರ್ಕಾರದ ಒಡೆತನದ ಸಾರ್ವಜನಿಕ ವಲಯ ಉದ್ಯಮಗಳ ನೌಕರರುಗಳನ್ನು ಹೊರತುಪಡಿಸಿ ಮತ್ತು 1997ರ ಏಪ್ರಿಲ್ ಮೊದಲನೇ ದಿವಸಕ್ಕೆ ಮುಂಚೆ ಈಗಾಗಲೇ ಸಂದಾಯ ಮಾಡಿರುವ ತೆರಿಗೆಗೆ ಸಂಬಂಧಿಸಿದಂತೆ 3ನೇ ಪ್ರಕರಣದ (1)ನೇ ಉಪ ಪ್ರಕರಣದ ನಾಲ್ಕನೆಯ ಪರಂತುಕದಲ್ಲಿ ನಿರ್ದಿಷ್ಟಪಡಿಸಿದ ಐದು ಚದರ ಮೀಟರುಗಳು ಮೀರದ ನೆಲ ಅಂತಸ್ತನ್ನು ಹೊಂದಿರುವ ಆಮ್ನಿ ಬಸ್‌ಗಳು ಮತ್ತು ಖಾಸಗಿ ಸೇವಾ ವಾಹನಗಳ ಸಂದರ್ಭದಲ್ಲಿ, 3ನೇ ಪ್ರಕರಣದ (1)ನೇ ಉಪ–ಪ್ರಕರಣದ ನಾಲ್ಕನೇ ಪರಂತುಕದಲ್ಲಿ ನಿರ್ದಿಷ್ಟಪಡಿಸಿದ ತೆರಿಗೆಯನ್ನು, (1)ನೇ ಉಪ–ಪ್ರಕರಣದ ಅಡಿಯಲ್ಲಿ ಸಂದಾಯ ಮಾಡಿದ ತೆರಿಗೆಯ ಅವಧಿಯು ಮುಕ್ತಾಯವಾದ ತರುವಾಯ ವಿಧಿಸತಕ್ಕದ್ದು ಮತ್ತು ಸದರಿ ಅವಧಿಯು ಮುಕ್ತಾಯವಾದ ದಿನಾಂಕದಿಂದ ಒಂದು ತಿಂಗಳ ಒಳಗಾಗಿ ಆ ತೆರಿಗೆಯನ್ನು ಸಂದಾಯ ಮಾಡತಕ್ಕದ್ದು.

ಅಲ್ಲದೇ ಪರಂತು, 2007ರ ಏಪ್ರಿಲ್ 1ನೇ ದಿನಾಂಕಕ್ಕೆ ಮೊದಲು ಈಗಾಗಲೇ ತೆರಿಗೆಯನ್ನು ಸಂದಾಯ ಮಾಡಿದ ಭಾರ ಹೇರಿದಾಗ 1500 ಕಿ.ಗ್ರಾಂ. ತೂಕವನ್ನು ಮೀರಿದ ಆದರೆ, 3000 ಕಿ.ಗ್ರಾಂ ಮೀರದ ಒಟ್ಟು ವಾಹನ ತೂಕವನ್ನು ಹೊಂದಿರುವ ಸರಕು ವಾಹನಗಳ ಸಂದರ್ಭದಲ್ಲಿ 3ನೇ ಪ್ರಕರಣದ (1)ನೇ ಉಪ–ಪ್ರಕರಣದ ನಾಲ್ಕನೇ ಪರಂತುಕಕ್ಕೆ (ಎಎ) ಖಂಡದಲ್ಲಿ ನಿರ್ದಿಷ್ಟಪಡಿಸಿದ ತೆರಿಗೆಯನ್ನು, (1)ನೇ ಉಪ–ಪ್ರಕರಣದ ಅಡಿಯಲ್ಲಿ ತೆರಿಗೆಯನ್ನು ಸಂದಾಯ ಮಾಡಿದ ಅವಧಿಯು ಮುಕ್ತಾಯವಾದ ತರುವಾಯ ವಿಧಿಸತಕ್ಕದ್ದು ಮತ್ತು ಅಂಥ ತೆರಿಗೆಯನ್ನು, ಕರ್ನಾಟಕ ಮೋಟಾರು ವಾಹನಗಳ ತೆರಿಗೆ (ತಿದ್ದುಪಡಿ) ಅಧಿನಿಯಮ, 2007ರ ಪ್ರಾರಂಭದ ದಿನಾಂಕದಿಂದ ಒಂದು ತಿಂಗಳೊಳಗೆ ಸಂದಾಯ ಮಾಡತಕ್ಕದ್ದು.

ಮತ್ತು ಪರಂತು, 3ನೇ ಪ್ರಕರಣದ (1)ನೇ ಉಪ ಪ್ರಕರಣದ ಮೂರನೆಯ ಪರಂತುಕದಲ್ಲಿ ನಿರ್ದಿಷ್ಟಪಡಿಸಿದ ವಿಂಟೇಜ್ ಕಾರು ಮತ್ತು ಕ್ಲಾಸಿಕ್ ಕಾರಿನ ಸಂಬಂಧದಲ್ಲಿ 1991ನೇ ಏಪ್ರಿಲ್ 1ನೇ ದಿನಾಂಕಕ್ಕೆ ಮುಂಚೆ ಈಗಾಗಲೇ ಸಂದಾಯ ಮಾಡಿದ ತೆರಿಗೆಗೆ ಸಂಬಂಧಿಸಿದಂತೆ, 3ನೇ ಪ್ರಕರಣದ 1ನೇ ಉಪ ಪ್ರಕರಣದ ಮೂರನೇ ಪರಂತುಕದಲ್ಲಿ ನಿರ್ದಿಷ್ಟಪಡಿಸಿದ ತೆರಿಗೆಯನ್ನು, (1)ನೇ ಉಪ–ಪ್ರಕರಣದ ಮೇರೆಗೆ ಸಂದಾಯ ಮಾಡಲಾದ ತೆರಿಗೆಯ ಅವಧಿಯು ಮುಕ್ತಾಯವಾದ ತರುವಾಯ ವಿಧಿಸತಕ್ಕದ್ದು ಮತ್ತು ಅಂಥ ತೆರಿಗೆಯನ್ನು ಸದರಿ ಅವಧಿಯ ಮುಕ್ತಾಯದ ದಿನಾಂಕದಿಂದ ಒಂದು ತಿಂಗಳ ಅವಧಿಯೊಳಗಾಗಿ ಸಂದಾಯ ಮಾಡತಕ್ಕದ್ದು.

**ವಿವರಣೆ:–** ಅರ್ಧ ವರ್ಷಕ್ಕಾಗಿನ ತೆರಿಗೆಯು ಕಾಲು ವರ್ಷಕ್ಕಾಗಿನ ತೆರಿಗೆಯ ಎರಡರಷ್ಟಾಗಿರತಕ್ಕದ್ದು ಮತ್ತು ವರ್ಷಕ್ಕಾಗಿನ ತೆರಿಗೆಯು ಕಾಲು ವರ್ಷದ ತೆರಿಗೆಯ ನಾಲ್ಕರಷ್ಟಿರತಕ್ಕದ್ದು.

XX XX XX

**ಅನುಸೂಚಿ**

**ಭಾಗ–ಎ**

[3(1)ನೇ ಪ್ರಕರಣವನ್ನು ನೋಡಿ]

| **ಬಾಬು ಸಂಖ್ಯೆ** | **ವಾಹನಗಳ ವರ್ಗ** | **ಗಾಳಿ ತುಂಬಿದ ಟೈರುಗಳನ್ನು ಜೋಡಿಸಿರುವ ವಾಹನಗಳಿಗಾಗಿ ತ್ರೈಮಾಸಿಕ ತೆರಿಗೆ** |
|---|---|---|
| **1** | **2** | **3** |
| **1** | ಕೇಂದ್ರ ಸರ್ಕಾರದ ನೌಕರರು ಅಥವಾ ರಕ್ಷಣಾ ಸಿಬ್ಬಂದಿ ಅಥವಾ ರಾಷ್ಟ್ರೀಕೃತ ಬ್ಯಾಂಕುಗಳೂ ಸೇರಿದಂತೆ ಭಾರತ ಸರ್ಕಾರದ ಒಡೆತನದ ಸಾರ್ವಜನಿಕ ವಲಯ ಉದ್ಯಮಗಳ ನೌಕರರ ಒಡೆತನದ (ಯಾಂತ್ರಿಕ ಶಕ್ತಿಯ ಮೂಲಕ ಅದನ್ನು ಚಾಲನೆ ಮಾಡುವುದಕ್ಕಾಗಿ ಅದರ ಜೋಡಣೆಯೊಂದಿಗೆ ಇರುವ ಮೋಟಾರು ಸ್ಕೂಟರುಗಳು ಮತ್ತು ಸೈಕಲ್‌ಗಳನ್ನು ಒಳಗೊಂಡ) ಮೋಟಾರ್ ಸೈಕಲ್‌ಗಳು. | ರೂ. ಪೈ<br>125.00 |
| XX XX XX | | |
| **14** | ಕೇಂದ್ರ ಸರ್ಕಾರದ ನೌಕರರು ಅಥವಾ ರಕ್ಷಣಾ ಸಿಬ್ಬಂದಿ ಅಥವಾ ರಾಷ್ಟ್ರೀಕೃತ ಬ್ಯಾಂಕುಗಳೂ ಸೇರಿದಂತೆ ಭಾರತ ಸರ್ಕಾರದ ಒಡೆತನದ ಸಾರ್ವಜನಿಕ ವಲಯ ಉದ್ಯಮಗಳ ನೌಕರರ ಒಡೆತನ ಹೊಂದಿರುವ ಜೀಪುಗಳನ್ನು ಒಳಗೊಂಡಂತೆ ಮೋಟಾರು ಕಾರುಗಳು | 500–00 |

## KARNATAKA LEGISLATIVE ASSEMBLY

### THIRTEENTH LEGISLATIVE ASSEMBLY

### ELEVENTH SESSION

## THE KARNATAKA MOTOR VEHICLES TAXATION (SECOND AMENDMENT) BILL, 2011

### (L.A. Bill No. 39 of 2011)

A Bill further to amend the Karnataka Motor Vehicles Taxation Act, 1957.

Whereas it is expedient further to amend the Karnataka Motor Vehicles Taxation Act, 1957 (Karnataka Act 35 of 1957) for the purposes hereinafter appearing:

Be it enacted by the Karnataka State Legislature in the Sixty-second year of the Republic of India as follows:-

**1. Short title and commencement.-** (1) This Act may be called the Karnataka Motor Vehicles Taxation (Second Amendment) Act, 2011.

(2) It shall come into force at once.

**2. Amendment of section 3.-** In the Karnataka Motor Vehicles Taxation Act, 1957 (Karnataka Act 35 of 1957) (hereinafter referred to as principal Act), in section 3, in sub-section (1),-

(i) in the first proviso, after the words, “Nationalised Banks” the words, “which are brought with them to the State of Karnataka on transfer for which lifetime tax, or tax quarterly or annually, as the case may be, has already been paid in other states or union territories” shall be inserted.

(ii) in the fourth proviso, in clause (b), after the words, “Nationalised Banks” the words, “which are brought with them to the State of Karnataka on transfer for which lifetime tax, or tax quarterly or annually, as the case may be, has already been paid in other states or union territories” shall be inserted.

**3. Amendment of section 4.-** In section 4 of the Principal Act, in sub-section (1) for the third proviso, the following shall be substituted, namely:-

“Provided also that in case of three wheelers including auto rickshaws used for transportation of goods not exceeding 1500 kgs. in weight laden and vehicles permitted to carry three passengers (excluding driver) either for hire or reward or not; motor cycle (including motor scooter and cycle with attachment for propelling the same by mechanical power) and motor cars including jeeps, (other than those owned by the Central Government Employees, Defence personnel or employees of public sector undertakings owned by Government of India including nationalised banks which are brought with them to the State of Karnataka on transfer for which lifetime tax, or tax quarterly or annually, as the case may be, has already been paid in other states or union territories and omni buses and private service vehicles having floor area not exceeding five square meters specified in the fourth proviso to sub-section (1) of section 3 in respect of which tax is already paid prior to the first day of April, 1997 or prior to the date of commencement of the Karnataka Motor Vehicles Taxation (Amendment) Act, 2011 as the case may be, the tax specified in the first proviso or in the fourth proviso to sub-section (1) of section 3 as the case may be shall be levied after the expiry of the period for which tax is paid under sub-section (1) and the tax shall be paid within one month from the date of expiry of the said period”.

**4. Amendment of schedule.-** In the schedule to the principal Act in Part - A,-

(i) in item No.1, in column No.2, after the words "including Nationalised banks" the words, “which are brought with them to the State of Karnataka on transfer for which lifetime tax, or tax quarterly or annually, as the case may be, has already been paid in other states or union territories” shall be inserted.

(ii) in item No.14, in column No.2, after the words "including Nationalised banks", the words “which are brought with them to the State of Karnataka on transfer for which lifetime tax, or tax quarterly or annually, as the case may be, has already been paid in other states or union territories” shall be inserted.

## STATEMENT OF OBJECTS AND REASONS

It is considered necessary to amend the Karnataka Motor Vehicles Taxation Act, 1957, to provide for a provision to extend the benefit of tax concession to the Central Government employees, defence personnel, employees of Central Government undertaking including nationalised banks, who bring along with them their vehicles on transfer to the State of Karnataka if they have already paid life time tax or tax quarlerly or annually, as the case may be, in other States or Union territories.

Hence the Bill.

## FINANCIAL MEMORANDUM

There is no extra expenditure to the consolidated fund of the State by the proposed measure.

**R. ASHOK**
Minister for Home and Transport

**P. OMPRAKASHA**
Secretary
Karnataka Legislative Assembly

## ANNEXURE

### EXTRACT FROM THE KARNATAKA MOTOR VEHICLES TAXATION ACT, 1957
### (KARNATAKA ACT 35 OF 1957)

**XX** **XX** **XX**

**3. Levy of tax.-** (1) A tax at the rates specified in Part A of the Schedule shall be levied on all motor vehicles suitable for use on roads.

Provided that in the case of a motor cycle (including motor scooter and cycle with attachment for propelling the same by mechanical power) other than those owned by Central Government employees or Defence Personnel or employees of public sector undertakings owned by Government of India including nationalised banks the tax shall be levied at the rates specified in part A1 of the schedule:

Provided further that in the case of tractors, trailers and power tiller trailers,—

(a) owned by agriculturists and whose main source of income is from agriculture;

(b) owned by agricultural Co-operative Societies including Vyavasaya Seva Sahakari Sangha Niyamitha, Raitha Seva Sahakari Sangha Niyamitha, Sericulture-cum-Farmers Co-operative Societies, Large Sized Co-operative Societies, Co-operative Agricultural Banks, Small sized Co-operative Societies, Agricultural Credit Societies, Multipurpose Co-operative Credit Societies, Doddapramanada Prathamika Patthina Sahakari Sangha, Primary Co-operative Agriculture and Rural Development Bank and Services Co-operative Societies; and

(c) not falling under clauses (a) and (b) above but used exclusively for carrying out such agricultural operations as may be prescribed, the tax shall be levied at the rates specified in Part- A2 of the schedule:

Provided also that in case of Vintage-car and Classic car, the tax shall be levied at the rates specified in Part A3 of the schedule:

Provided also that:—

(a) In case of three wheelers including autorickshaws used for transportation of goods not exceeding 1500 kgs. in weight laden and vehicles permitted to carry three passengers (excluding driver) either used for hire or reward or not, the tax shall be levied at the rates specified in Part ‘A4’ of the schedule.

(aa) In case of goods vehicles having gross vehicle weight exceeding 1,500 kgs but not exceeding 5,500 Kgs in weight laden, whether used for hire or reward or not, tax shall be levied at the rates specified in Part A6 of the Schedule

(b) in case of motor cars including jeeps (other than those owned by companies. Central Government employees or defence personnel or employees of public sector undertakings owned by Government of India including nationalised banks and omni buses and private service vehicles having floor area not exceeding five square meters, tax shall be levied at the rates specified in part A5 of the Schedule.

**Explanation.—** A motor vehicle of which the certificate of registration is current shall, for the purposes of this Act, be deemed to be a vehicle suitable for use on roads.

**Note.—** For the purpose of the above Explanation the certificate of registration shall, notwithstanding anything contained in section 38 of the Motor Vehicles Act, 1939, be deemed to be current even if the certificate of fitness is not effective provided such certificate of fitness has not been cancelled.

(c)In case of Construction Equipment Vehicles (as defined in clause(ca) of rule 2 of the Central Motor Vehicle Rules, 1989) and vehicles fitted with air compressor and generators tax shall be levied at the rate specified in Part A-7 of the Schedule.

**XX** **XX** **XX**

**4. Payment of tax.-** (1) The tax levied under section 3 shall be paid in advance by the registered owner or person having possession or control of the motor vehicle, for a quarter, half-year or year, at his choice, within fifteen days from the commencement of such quarter, half-year, or year as the case may be:

Provided that the tax in respect of vehicles specified in item 1 and 14(2) of Part A of the Schedule shall be paid annually subject to such conditions as may be specified by the Government from time to time:

Provided also that notwithstanding anything in this sub-section such tax may be paid in advance in a lumpsum by such owner or person at his choice, for a period of five years or ten years within fifteen days from the commencement of the first year of such period of five years or ten years:

Provided also that in case of three wheelers including autorickshaws used for transportation of goods not exceeding 1500 kgs. in weight laden and vehicles permitted to carry three passengers (excluding driver) either for hire or reward or not, motor cars including jeeps (other than those owned by the Central Government Employees or Defence personnel) or employees of public sector undertakings owned by Government of India including nationalised banks and omni buses and private service vehicles having floor area not exceeding five square meters specified in the fourth proviso to sub-section (1) of section 3 in respect of which tax is already paid prior to the first day of April, 1997, the tax specified in the fourth proviso to sub-section (1) of section 3 shall be levied after the expiry of the period for which tax is paid under sub-section (1) and the tax shall be paid within one month from the date of expiry of the said period:

Provided further that in case of goods vehicles having gross vehicle weight exceeding 1,500 kgs but not exceeding 3,000 kgs in weight laden, in respect of which tax is already paid prior to 1st day of April, 2007, the tax specified in clause (aa) to the fourth proviso to sub-section (1) of Section 3, shall be levied after the expiry of the period for which the tax is paid under sub-section (1) and such tax shall be paid within one month from the date of commencement of the Karnataka Motor Vehicles Taxation (Amendment) Act, 2007.

Provided further that in case of Vintage car and Classic car specified in third proviso to sub-section (1) of Section 3, in respect of which tax is already paid prior to 1st day of April, 1991, the tax specified in the third proviso to sub-section (1) of Section 3 shall be levied after the expiry of the period for which the tax is paid under sub-section (1) and such tax shall be paid within one month from the date of expiry of the said period.

**Explanation.—** The tax for half-year shall be double the tax for a quarter and the tax for a year shall be four times the tax for a quarter.

**XX** **XX** **XX**

**SCHEDULE**

**PART 'A'**

[See Section 3(1)]

| Item No. | Class of vehicles | Quarterly tax for vehicles fitted with pneumatic tyres |
|---|---|---|
| **1** | **2** | **3** |
| | | Rs. Ps |
| 1. | Motor Cycles (including Motor Scooters and Cycles with attachment of propelling the same by mechanical power) owned by Central Government Employees or Defence Personnel or employees of public sector undertakings owned by Government of India including nationalised banks | 125.00 |
| **XX** | **XX** | **XX** |

| | | |
|---|---|---|
| 14. | (2) Motor Cars including Jeeps owned by Central Government Employees or defence personnel or employees of public sector undertakings owned by Government of India including nationalised banks | 500.00 |

**P. OMPRAKASHA**
Secretary
Karnataka Legislative Assembly


**ವಿಶೇಷ ಪತ್ರಿಕೆ**

| ಭಾಗ – IV-A | ಬೆಂಗಳೂರು, ಬುಧವಾರ, ಡಿಸೆಂಬರ್ ೧೪, ೨೦೧೧ (ಮಾರ್ಗಶಿರ ೨೩, ಶಕ ವರ್ಷ ೧೯೩೩) | ನಂ. ೯೭೯ |
|---|---|---|


## KARNATAKA LEGISLATIVE ASSEMBLY SECRETARIAT

## NOTIFICATION

**No. KLA/LGA/44/Bill/2011, Bangalore, Dated: 14.12.2011**

The following Bill was introduced in Legislative Assembly on 14.12.2011.

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹನ್ನೊಂದನೇ ಅಧಿವೇಶನ**

## ಕರ್ನಾಟಕ ಸಂಘಗಳ ನೋಂದಣಿ (ತಿದ್ದುಪಡಿ) ವಿಧೇಯಕ, 2011

**(2011ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 44)**

ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ, 1960ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡು ಬರುವ ಉದ್ದೇಶಗಳಿಗಾಗಿ, ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ, 1960ನ್ನು (1960ರ ಕರ್ನಾಟಕ ಅಧಿನಿಯಮ 17) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೆರಡನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಸಂಘಗಳ ನೋಂದಣಿ (ತಿದ್ದುಪಡಿ) ಅಧಿನಿಯಮ, 2011 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 10ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ, 1960ರ (1960ರ ಕರ್ನಾಟಕ ಅಧಿನಿಯಮ 17) 10ನೇ ಪ್ರಕರಣದಲ್ಲಿ,–

(ಎ) (2)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(2) (1)ನೇ ಉಪಪ್ರಕರಣದ ಅಡಿಯಲ್ಲಿ ಮಾಡಿದ ಪ್ರತಿಯೊಂದು ತಿದ್ದುಪಡಿಯನ್ನು ಮಾಡಿದಂದಿನಿಂದ ಮೂವತ್ತು ದಿನಗಳೊಳಗೆ ಅವುಗಳನ್ನು ರಿಜಿಸ್ಟ್ರಾರ್‌ರವರಿಗೆ ಸಲ್ಲಿಸತಕ್ಕದ್ದು. (1)ನೇ ಉಪಪ್ರಕರಣದ ಅಡಿಯಲ್ಲಿ ಮಾಡಿದ ತಿದ್ದುಪಡಿಯು ಈ ಅಧಿನಿಯಮದ ಉಪಬಂಧಗಳಿಗೆ ಮತ್ತು ಅದರಡಿಯಲ್ಲಿ ಮಾಡಿದ ನಿಯಮಗಳಿಗೆ ಅನುಸಾರವಾಗಿದೆಯೆಂದು ರಿಜಿಸ್ಟ್ರಾರ್‌ರವರಿಗೆ ಮನವರಿಕೆಯಾದರೆ, ಅದನ್ನು ನೋಂದಾಯಿಸತಕ್ಕದ್ದು. ಅಂಥ ತಿದ್ದುಪಡಿಯು (1)ನೇ ಉಪಪ್ರಕರಣದ ಅಡಿಯಲ್ಲಿ ಗೊತ್ತುವಳಿಯನ್ನು ಅಂಗೀಕರಿಸಿದ ದಿನಾಂಕದಿಂದ ಜಾರಿಗೆ ಬರತಕ್ಕದ್ದು:

ಪರಂತು, ಸದರಿ ಅವಧಿಯೊಳಗೆ ಗೊತ್ತುವಳಿಯನ್ನು ಸಲ್ಲಿಸದಿರುವುದಕ್ಕೆ ಸಾಕಷ್ಟು ಕಾರಣಗಳಿವೆಯೆಂದು ರಿಜಿಸ್ಟ್ರಾರ್‌ವರಿಗೆ ಮನವರಿಕೆಯಾದರೆ, ಆತನು ಒಂದು ವರ್ಷಕ್ಕೆ ಮೀರದಂಥ ಅವಧಿಗೆ ವಿಳಂಬವನ್ನು ಲಿಖಿತದಲ್ಲಿ ಮನ್ನಿಸಬಹುದು."

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ 1960ರಲ್ಲಿ, ಸಂಘವು ಸಲ್ಲಿಸಿದ ನಿಯಮಗಳು ಮತ್ತು ವಿನಿಯಮಗಳಿಗೆ ತಿದ್ದುಪಡಿಯನ್ನು ಸ್ವೀಕರಿಸಲು ಅಥವಾ ತಿರಸ್ಕರಿಸಲು ರಿಜಿಸ್ಟ್ರಾರ್‌ರವರಿಗೆ ಪ್ರಸ್ತುತ ಯಾವುದೇ ಕಾಲಮಿತಿಯನ್ನು ಗೊತ್ತುಪಡಿಸಿರುವುದಿಲ್ಲ. ಆದುದರಿಂದ, ರಿಜಿಸ್ಟ್ರಾರ್‌ರವರು ತಿದ್ದುಪಡಿಯನ್ನು ಅನುಮೋದಿಸಿದಲ್ಲಿ, ಸಂಘಗಳ ಪ್ರಸ್ತಾವಿತ ತಿದ್ದುಪಡಿಯನ್ನು ಗೊತ್ತುವಳಿಯನ್ನು ಅಂಗೀಕರಿಸಿದ ದಿನಾಂಕದಿಂದ ಜಾರಿಗೆ ತರುವುದಕ್ಕಾಗಿ ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ, 1960ರ 10ನೇ ಪ್ರಕರಣಕ್ಕೆ ತಿದ್ದುಪಡಿಯನ್ನು ಪ್ರಸ್ತಾವಿಸಲಾಗಿದೆ.

ಗೊತ್ತುವಳಿಯನ್ನು ಸಲ್ಲಿಸುವಲ್ಲಿ, ಮೂವತ್ತು ದಿನಗಳ ಅವಧಿಯನ್ನು ಮೀರಿ ಉಂಟಾದ ವಿಳಂಬವನ್ನು ಮನ್ನಿಸಲೂ ಕೂಡ ಉಪಬಂಧ ಕಲ್ಪಿಸುವುದಕ್ಕೆ ಪ್ರಸ್ತಾವಿಸಲಾಗಿದೆ.

ಆದ್ದರಿಂದ, ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಲಕ್ಷ್ಮಣ ಎಸ್. ಸವದಿ**
ಸಹಕಾರ ಮತ್ತು ಕೃಷಿ ಮಾರುಕಟ್ಟೆ ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**ಅನುಬಂಧ**

**xx** **xx** **xx**

**ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ, 1960ನ್ನು (1960ರ ಕರ್ನಾಟಕ ಅಧಿನಿಯಮ 17) ಉದ್ಧೃತ ಭಾಗ**

**xx** **xx** **xx**

**10. ಹೆಸರು, ನಿಯಮಗಳು ಮತ್ತು ವಿನಿಯಮಗಳ ಬದಲಾವಣೆ.–** (1) ಸಂಘದ ಹೆಸರು ಮತ್ತು ನಿಯಮಗಳು ಮತ್ತು ವಿನಿಯಮಗಳನ್ನು, ವಿಶೇಷ ಸಾಮಾನ್ಯ ಸಭೆಯ ದಿನಾಂಕಕ್ಕೆ ಇಪ್ಪತ್ತೊಂದು ದಿನಗಳ ಮುಂಚೆ ಸಂಘದ ಪ್ರತಿಯೊಬ್ಬ ಸದಸ್ಯನಿಗೆ ಅಂಚೆಯ ಮೂಲಕ ವಿಲೆಯಾದ ಅಥವಾ ಕಳುಹಿಸಲಾದ ಲಿಖಿತದ ಅಥವಾ ಮುದ್ರಿತ ಸೂಚನೆಯ ಉದ್ದೇಶಕ್ಕಾಗಿ ನಡೆಸಲಾದ ವಿಶೇಷ ಸಾಮಾನ್ಯ ಸಭೆಯಲ್ಲಿ ಹೊರಡಿಸಿದ ಗೊತ್ತುವಳಿಯ ಮೂಲಕ, ತಿದ್ದುಪಡಿ ಮಾಡಬಹುದು ಮತ್ತು ತಿದ್ದುಪಡಿಯನ್ನು ಪ್ರಸ್ತಾವಿಸಿದ ಗೊತ್ತುವಳಿಗೆ, ಗೊತ್ತುವಳಿಯ ಪರವಾಗಿ ಮತ ಚಲಾಯಿಸಲು ಅರ್ಹರಿರುವ ವ್ಯಕ್ತಿಗಳ ಮೂಲಕ, ಹಾಗೆ ಮಾಡಲು ಅರ್ಹರಾಗಿರುವ ಸದಸ್ಯರ ಮೂಲಕ, ವೈಯಕ್ತಿಕವಾಗಿ ಅಥವಾ ಪ್ರತಿನಿಧಿಗಳನ್ನು ಅನುಮತಿಸಲಾಗಿದ್ದಲ್ಲಿ, ಪ್ರತಿನಿಧಿ ಮತದ ಮೂಲಕ ಚಲಾಯಿಸಿದ ಮತಗಳ ಮೂಲಕ ಅಂಗೀಕರಿಸಬಹುದು ಮತ್ತು ಅಂಥ ಮತಗಳು, ಹಾಗೆ ಅರ್ಹರಾಗಿದ್ದು ಗೊತ್ತುವಳಿಯ ವಿರುದ್ಧವಾಗಿ ಚಲಾಯಿದ ಮತಗಳ ಸಂಖ್ಯೆಯ ಮೂರು ಬಾರಿಗಿಂತ ಕಡಿಮೆ ಇರತಕ್ಕದ್ದಲ್ಲ.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಮಾಡಿದ ಪ್ರತಿಯೊಂದು ತಿದ್ದುಪಡಿಯ ಅವುಗಳನ್ನು ಮಾಡಿದಂದಿನಿಂದ ಮೂವತ್ತು ದಿನಗಳೊಳಗೆ ಅವುಗಳನ್ನು ರಿಜಿಸ್ಟ್ರಾರ್ ರವರಿಗೆ ಸಲ್ಲಿಸತಕ್ಕದ್ದು ಮತ್ತು ತಿದ್ದುಪಡಿಯು ಈ ಅಧಿನಿಯಮದ ಉಪಬಂಧಗಳಿಗೆ ಮತ್ತು ಅದರಡಿಯಲ್ಲಿ ಮಾಡಿದ ನಿಯಮಗಳಿಗೆ ಅನುಸಾರವಾಗಿದೆಯೆಂದು ರಿಜಿಸ್ಟ್ರಾರ್‌ನು ಮನದಟ್ಟು ಮಾಡಿಕೊಂಡರೆ ಅದನ್ನು ನೋಂದಾಯಿಸತಕ್ಕದ್ದು. ಅಂಥ ತಿದ್ದುಪಡಿಯ ಹಾಗೆ ನೋಂದಾಯಿಸಿದ ನಂತರವೇ ಜಾರಿಗೆ ಬರತಕ್ಕದ್ದು:

**xx** **xx** **xx**

